# ಲೋಚನ

ಸಂಪುಟ ೩ ಡಿಸೆಂಬರ್ ೧೯೮೫ ಸಂಚಿಕೆ ೨



## ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

ವಾರ್ಷಿಕ ಚಂದಾ: ರೂ. ೧೦-೦೦ ಬಿಡಿ ಸಂಚಿಕೆ: ರೂ. ೬-೦೦

# ' ಲೋಚನ '

## ಸಂಪಾದಕ ಮಂಡಲಿ



## ಲೇಖನಗಳು–ಟಿಪ್ಪಣಿಗಳು

19–12–1982ರಂದು ನಡೆದ ಪ್ರತಿಷ್ಠಾನದ ಕಾರ್ಯಸಮಿತಿಯಲ್ಲಿ ಅಂಗೀಕೃತವಾದ ನಿರ್ಣಯ : "ಸಂಸ್ಥಾಪಕ ಕಾರ್ಯದರ್ಶಿಯವರ ಸೂಚನೆಯಂತೆ, ಬರುವ 1983ನೆಯ ವರ್ಷದಿಂದ ಸಂಶೋಧನಾತ್ಮಕ ಪಾಂಡಿತ್ಯಪೂರ್ಣ ಲೇಖನಗಳು ಹಾಗೂ ಹೊಸದಾಗಿ ಪ್ರಕಟವಾಗುವ ಉತ್ತಮ ಮಟ್ಟದ ಸಂಪಾದಿತ ಗ್ರಂಥಗಳು ಮತ್ತು ಶಾಸ್ತ್ರ ಸಾಹಿತ್ಯದ ಗ್ರಂಥಗಳು–ಇವುಗಳ ಮೇಲಣ ವಿಮರ್ಶೆಗಳು, ವಿದ್ವದ್ವಿಚಾರ ಮತ್ತು ವಿದ್ವತ್ ಪ್ರಪಂಚದ ವಿದ್ಯಮಾನ ಇವುಗಳಿಗೆ ಸಂಬಂಧಿಸಿದ ಟೀಕೆ ಟಿಪ್ಪಣಿಗಳು – ಇವುಗಳಿಗೆ ಮೀಸಲಾದ ವಿದ್ವತ್‌ಪತ್ರಿಕೆಯನ್ನು ವರ್ಷಕ್ಕೆ ಎರಡು ಸಲ (ಜೂನ್ ಮತ್ತು ಡಿಸೆಂಬರ್) ಪ್ರಕಟಿಸಬಹುದೆಂದೂ ಈ ಪತ್ರಿಕೆಗೆ "ಲೋಚನ" ಎಂಬ ಹೆಸರನ್ನು ಇಡಬಹುದೆಂದೂ ತೀರ್ಮಾನಿಸಲಾಯಿತು. ಪ್ರಾರಂಭದಲ್ಲಿ ಪತ್ರಿಕೆಯ ಗಾತ್ರ ಡೆಮಿ 1/8 ಆಕಾರದ 64 ಪುಟಗಳಷ್ಟು ಇರಬಹುದೆಂದು ಸೂಚಿಸಲಾಯಿತು."

## ಲೇಖನಗಳಿಗೆ ಆಹ್ವಾನ

ಮೇಲ್ಕಂಡ ನಿರ್ಣಯದಲ್ಲಿ ವ್ಯಕ್ತಪಟ್ಟಿರುವ ಆಶಯಕ್ಕೆ ಅನುಗುಣವಾದ ಲೇಖನಗಳನ್ನು ವಿದ್ವಾಂಸರೂ ಭಾಷೆ ಸಾಹಿತ್ಯಗಳ ಪ್ರೌಢ ವಿದ್ಯಾರ್ಥಿಗಳೂ ಕಳಿಸಿಕೊಡಬೇಕೆಂದು ವಿನಂತಿ. 'ಲೋಚನ'ದ ಗಾತ್ರ ಪರಿಮಿತವಾದದ್ದರಿಂದ ಲೇಖನಗಳು ಅಚ್ಚಿನ 6–8 ಪುಟಗಳ ಪರಿಮಿತಿಯಲ್ಲಿ ಇದ್ದರೆ ಅನುಕೂಲ. ಟಿಪ್ಪಣಿಗಳು 1–2 ಪುಟಗಳ ಪರಿಮಿತಿಯಲ್ಲಿರಬಹುದು. ಲೇಖನಗಳು ಹಾಳೆಯ ಒಂದೇ ಪಕ್ಕದಲ್ಲಿ ಸ್ಫುಟವಾದ ಅಕ್ಷರಗಳಲ್ಲಿ ಬರೆದಿರಬೇಕು. ಅಡಿಟಿಪ್ಪಣಿಗಳನ್ನು ಪುಟದ ಅಡಿಯಲ್ಲಿಯೇ ಕಾಣಿಸುವುದು ಒಳಿತು. ಗ್ರಂಥ–ಲೇಖನಾಧಾರ ವಿವರಗಳನ್ನು (Bibliography) ಲೇಖನದ ಕಡೆಯಲ್ಲಿ ಕೊಡಬಹುದು. ಯಾವುದೇ ಕಾರಣದಿಂದ ಲೇಖನವನ್ನು ಹಿಂದಿರುಗಿಸಲಾಗದ ಪ್ರಯುಕ್ತ ಲೇಖಕರು ತಮ್ಮ ಲೇಖನದ ಒಂದು ಪ್ರತಿಯನ್ನು ಉಳಿಸಿಕೊಂಡಿರಬೇಕಾಗಿ ಕೋರಿಕೆ.

## ವಿನಿಮಯ ಪತ್ರಿಕೆಗಳು

೧. ಸಾರ್ವಜನಿಕ (ಇಂಗ್ಲಿಷ್) (ಬೆಂಗಳೂರು), ೨. ಸೋವಿಯತ್ ದೇಶ (ಮದರಾಸು), ೩. ಲಹರಿ (ಮದರಾಸು), ೪. ಅಂಕಣ (ಬೆಂಗಳೂರು), ೫. ಗ್ರಂಥಲೋಕ (ಮೈಸೂರು), ೬. ಅನ್ವೇಷಣೆ (ಬೆಂಗಳೂರು), ೭. ಚೆನ್ನುಡಿ (ಶಿವಮೊಗ್ಗ), ೮. ತರಳಬಾಳು (ಸಿರಿಗೆರೆ), ೯. ಸಾಧನೆ (ಬೆಂಗಳೂರು), ೧೦. ಪ್ರಬುದ್ಧ ಕರ್ಣಾಟಕ (ಮೈಸೂರು), ಮಾನವಿಕ ಕರ್ಣಾಟಕ (ಮೈಸೂರು).

**ವಿಮರ್ಶೆಗಾಗಿ ಗ್ರಂಥಗಳ ಎರಡು ಪ್ರತಿಗಳನ್ನು ಲೇಖಕರು ಕಳಿಸಬೇಕು.**

ಸೃಜನಾತ್ಮಕ ಗ್ರಂಥಗಳನ್ನು ಸಾಧಾರಣವಾಗಿ ವಿಮರ್ಶೆ ಮಾಡಲಾಗುವುದಿಲ್ಲ : ಆದರೆ ಕಳಿಸಿದರೆ, 'ಸ್ವೀಕಾರ' ಭಾಗದಲ್ಲಿ ಗಮನಿಸಲಾಗುವುದು. ವೈಶಿಷ್ಟ್ಯವುಳ್ಳ ಗ್ರಂಥಗಳನ್ನು ಸಾಧ್ಯವಾದರೆ ಅವಲೋಕನ ಮಾಡಿಸಲಾಗುವುದು.

## ಚಂದಾದಾರರಲ್ಲಿ ಮನವಿ

ಮುದ್ರಣ, ಕಾಗದಗಳ ಬೆಲೆ ಈಚಿನ ದಿನಗಳಲ್ಲಿ ಬಹಳ ವಾಗಿ ಏರಿರುವುದರಿಂದ 'ಲೋಚನ'ದ ಈಗಿನ ಚಂದಾ ದರ ವನ್ನು ಈ ವರ್ಷದಿಂದ, ಎಂದರೆ 1986 ಜೂನ್ ಸಂಚಿಕೆ ಯಿಂದ 10 ರೂಪಾಯಿಗಳಿಗೆ ಹೆಚ್ಚಿಸತಕ್ಕದೆಂದು ಕಾರ್ಯ ಸಮಿತಿ ತೀರ್ಮಾನಿಸಿದೆ. ಈ ಹೆಚ್ಚುವರಿಯನ್ನು ಚಂದಾ ದಾರರು ದಯವಿಟ್ಟು ಗಮನಿಸಬೇಕಾಗಿ ವಿನಂತಿ.

ಎಂ. ವಿ. ಸೀತಾರಾಮಯ್ಯ
ವ್ಯವಸ್ಥಾಪಕ ಸಂಪಾದಕ

For Distribution among Members Only

# LOCHANA

(A Half-yearly Journal Published by B. M. Sri· Memorial Foundation, 54, 3rd Cross, Gavipuram Extension, Bangalore-19)

*Chief Editor:* Prof. G. Venkatasubbiah
*Executive Editor:* Prof. M. V. Seetha Ramiah
*Editor:* T. R. Mahadeviah

*Vol. 3* *December 1985* *No. 2*

## CONTENTS

# ಪರಿವಿಡಿ

# ಲೋಚನ

ಸಂಪುಟ ೩ ಡಿಸೆಂಬರ್ ೧೯೮೫ ಸಂಚಿಕೆ ೨

## ಎರಡು ಸ್ವರವಚನಗಳು

೧

ರಾಗ : ಶಂಕರಾಭರಣ ತಾಳ : (ಆದಿ)

ಲಿಂಗದ ಸದುಭಾವವ ತಿಳಿದಾ
ಸಂಗವೆ ಲಿಂಗೈಕ್ಯದ ನಿಜವು ॥ ಪಲ್ಲ ॥

॥ ಪದ ॥ ಮಾಯಾವೈಭವವಳಿದ ಬಳಿಕ ಮುಂ-
ದಾಯಾಸಬಟ್ಟರಸಲಿಕಿಲ್ಲಾ
ಬೀಯವಾಗದಿರ್ದಡೆ ತಾನೀಗಪ್ಪ-
ಮೇಯ ಮಹಾಘನತರ ಲಿಂಗಾ ॥ ೧ ॥

ಆದಿ ಮಧ್ಯಾವಸಾನರಹಿತ ಗುಣಭೇದ ವಿ-
ವಾದ ಸಮಯ ದೂರಾ
ನಾದಬಿಂದು ಕಳಾತೀತ ಪರಾನಂ-
ದೋದಿತ ತಾನೆ ಮೂಲ ಲಿಂಗಾ ॥ ೨ ॥

ದಾಸೋಹಂ ಸೋಹಂ ಸಯಂಬೀ ಸಂ-
ಧಾನಕೆ ತೆರಹಿಲ್ಲ
ಸೂಸದೆ ಬೀಸರವಾಗದೆ ಪರಮ ಮ-
ಹಾಸುಖ ಸಾರವದೆ ಲಿಂಗಾ ॥ ೩ ॥

ಭಾವಾಭಾವದ ಭಾವನೆಗಟ್ಟು
ಭಾವಾಭಾವ ವಿವರವಳಿದು
ಕೇವಲ ಚಿನ್ಮಾತ್ರವಳರೂಪ ನಿ-
ಜಾವರಣಾಭಿಧವದು ಲಿಂಗಾ ॥ ೪ ॥

ಧ್ಯಾನಿಸಲಿಲ್ಲದ ಮರೆಯಲಿಲ್ಲದ ಸು-
ಜ್ಞಾನವ ದೆಶೆಯಲರಿಯಲಿಲ್ಲದಾ
ಮಾನಸ ಕರ್ತ ಸಂಶಯವಿಲ್ಲದ ನಿಜ-
ದಾನಿ ನೀವುಪ್ಪೈಪುರ ಸೋಮೇಶಾ ॥ ೫ ॥

ಆಕರ : ಕೃಪೆ. ಎಸ್. ಉಮಾಪತಿ. (ಗರಿ 21 ಮುಂ.)

೨

ರಾಗ : ಬವುಳಿ ತಾಳ : (ಝಂಪೆ)

ಲಿಂಗಾಂಗಿ ಅಂಗ ಸಹ ಭೋಗಿ ಲಿಂಗ ಪ್ರಾಣಿ
ಲಿಂಗತತ್ತ್ವಗ್ರಾಹಿ ಲಿಂಗವಂತ ॥ ಪಲ್ಲ ॥

॥ ಪದ ॥ ಅಂಗದ ಲಿಂಗದ ವೇದೆಯಿಂದ ಪೂರ್ವಪ್ರಾಣ
ಸಂಗಗುಣವಳಿದು ನಿಜಲಿಂಗವಾದ
ಅಂಗ ಸಂಗ ಪ್ರಭಾವದೊಳು ಸರ್ವೇಂದ್ರಿಯ ಮು-
ಖಂಗಳಿಗೆ ಲಿಂಗತತ್ತ್ವ ಘಟಿಸಿದ ॥ ೧ ॥

ಬಳಿಕೇಂದ್ರಿಯಂಗಳ ಸಮೂಹವಗ್ನಿಯ ಸಂಗ
ದೊಳಗಾದ ಕಬ್ಬುನದ ಘಟ್ಟಿಯಂತೆ
ಉಳುಮೆಯಿಂ ಸಕಲ ವಿಷಯಂಗಳೊಳು ವರ್ತಿಪುದು
ತಿಳಿಯೆ ತಾ ಲಿಂಗಸ್ವಭಾವ ತಾನಾಗಿ ॥ ೨ ॥

ಲೌಕಿಕಾಚಾರವನು ಕಳೆದು ಲಿಂಗಾಚಾರ-
ವೇಕಾರ್ಥವಾದ ಮಾರ್ಗದಲಿ ನಿಮ್ಮ
ನೂಕಿ ಸಂಶಯ ಸೂತಕ ಭ್ರಮೆಯಳಿದು ಲಿಂಗ
ಲೋಕವೆ ಲೋಕವಾಗಿರ್ದನ ॥ ೩ ॥

ನೋಡಿದಡೆ ನೋಡಿ ಮುಟ್ಟುವಡೆ ಮುಟ್ಟುವ ಮಾತ-
ನಾಡಲಾಡುವ ವುಂಡರುಂಬೋ ಗಮನ
ಮಾಡಿದರೆ ಮಾಡಿ ನಿಂದರೆ ನಿಂದು ಸರ್ವವನು
ಕೂಡಿ ವರ್ತಿಸುವ ಸಹವರ್ತಿಯಾಗಿ ॥ ೪ ॥

ರೂಪು ರುಚಿ ವಿಜ್ಞಾನದೊಳಗಮ್ಮ ವ್ಮಾ ಭಾವಾ
ಲೇಪವಳಿದರ್ಪಿತಾನರ್ಪಿತ ಗುಣಾ
ಲೋಪವಾದನುಪಮ ಚಿದಾನಂದ ಮಹಿಮನ-
ಮ್ಮೈಪುರದ ಸೋಮನಾಥನ ಶರಣನು ॥ ೫ ॥

ಆಕರ : ಕೃಪೆ. ಎಸ್. ಉಮಾಪತಿ (ಗ೦ 87 ಹಿಂ.)

# ಗಮಕಸಮಾಸವು ಸಮಾಸವೇ ಅಲ್ಲದಿದ್ದರೆ....

—ಎಚ್. ಎಸ್. ಬಿಳಿಗಿರಿ

ಬಿ.ಎಂ.ಶ್ರೀ. ಪ್ರತಿಷ್ಠಾನವು ಪ್ರಕಟಿಸಿರುವ "ಮೂರು ದತ್ತಿ ಉಪನ್ಯಾಸಗಳು" ಎಂಬ ಪುಸ್ತಕದಲ್ಲಿ "ಗಮಕ ಸಮಾಸವು ಸಮಾಸವೇ ?" ಎಂಬ ನನ್ನ ಉಪನ್ಯಾಸವು ಪ್ರಕಟವಾಗಿದೆ (ಪು. 73–93). ಅದನ್ನೋದಿದ ಮೇಲೆ ವಿದ್ವಾನ್ ಎನ್. ರಂಗನಾಥ ಶರ್ಮಾ ಅವರು ತಮ್ಮ ಕೆಲವು ವಿಚಾರಗಳನ್ನು ವಿದ್ವಾಂಸರ ಪರಿಶೀಲನೆಗೆ ಮಂಡಿಸ ಬೇಕೆಂದು ಮನಸ್ಸಾಗಿ "ಗಮಕ ಸಮಾಸ—ಒಂದು ಸಮೀಕ್ಷೆ" ಎಂಬ ಲೇಖನವನ್ನು ಬರೆದಿದ್ದಾರೆ. ಇದು "ಲೋಚನ"ದ ಮೂರನೇ ಸಂಪುಟದ ಒಂದನೇ ಸಂಚಿಕೆಯಲ್ಲಿ ಪ್ರಕಟವಾಗಿದೆ (ಪು. 17–32). ಗಮಕ ಸಮಾಸವು ವ್ಯಾಕರಣ ಶಾಸ್ತ್ರದ ದೃಷ್ಟಿ ಯಿಂದ ಸಮಾಸವೆನಿಸಿಕೊಳ್ಳಲು ಅರ್ಹವೇ ಅಲ್ಲವೇ ಎಂಬುದನ್ನು ಪರಿಶೀಲಿಸುವುದೇ ಅವರ ಲೇಖನದ ಉದ್ದೇಶವಾಗಿದೆ. ಆ ಲೇಖನದ ಕೆಲವು ಭಾಗಗಳಲ್ಲಿ ನನ್ನ ಉಪನ್ಯಾಸದಲ್ಲಿ ಬರುವ ಕೆಲವು ಮಾತುಗಳನ್ನು ಅವರು ಟೀಕಿಸಿದ್ದಾರೆ. ನನಗೆ ಪ್ರಸ್ತುತವಾದದ್ದು ಆ ಟೀಕೆಗಳು ಮಾತ್ರ. ಅವುಗಳನ್ನು ಕುರಿತು ಈ ಲೇಖನವನ್ನು ಬರೆದಿದ್ದೇನೆ.

"ಗಮಕ ಸಮಾಸವು ಸಮಾಸವೇ ಅಲ್ಲ" ಎಂಬುದು ನನ್ನ ಅಭಿಪ್ರಾಯ. ಗಮಕ ಸಮಾಸವು ಸಮಾಸವೇ ಅಲ್ಲದಿದ್ದರೆ, ಆ ಸಮಾಸದಲ್ಲಿ ಪೂರ್ವಪದಗಳಾಗಿ ಬರುವ ರೂಪಗಳ ಸಿದ್ಧಿ ಹೇಗಾಗುತ್ತದೆ ಎಂಬ ಪ್ರಶ್ನೆಯನ್ನೂ, ಆ ರೂಪಗಳಿಗೆ ಪದತ್ವ ಹೇಗೆ ಸಿದ್ಧಿಸುತ್ತದೆ ಎಂಬ ಪ್ರಶ್ನೆಯನ್ನೂ ಅವರು ಎತ್ತಿದ್ದಾರೆ. ಅವರ ಅನೇಕ ಆಕ್ಷೇಪಣೆಗಳ ಮೂಲದಲ್ಲಿ ಈ ಎರಡು ಪ್ರಶ್ನೆಗಳಿವೆ. ಈ ಪ್ರಶ್ನೆಗಳು ನಮ್ಮ ಪ್ರಾಚೀನವ್ಯಾಕರಣಗಳ ಚೌಕಟ್ಟಿನಲ್ಲಿ ಯೋಚಿಸುವ ವಿದ್ವಾಂಸರಿಗೆ ಮೂಲಭೂತ ವಾದ ಪ್ರಶ್ನೆಗಳೇ ಆಗಿವೆ. ಈ ಮೂಲಭೂತ ಪ್ರಶ್ನೆಗಳಿಗೆ ಉತ್ತರ ಕೊಡಲು ಹೊರಟರೆ, ವರ್ಣನಾತ್ಮಕ ವ್ಯಾಕರಣದ ಮೂಲತತ್ತ್ವಗಳಿಗನುಸಾರವಾಗಿ ಒಂದು ವ್ಯಾಕರಣವನ್ನೇ ಬರೆಯಬೇಕಾದೀತು. ಹಾಗೆಂದು ಏನನ್ನೂ ಬರೆಯದಿರುವಂತೆಯೂ ಇಲ್ಲ. ಆದುದರಿಂದ ಈ ಲೇಖನವನ್ನು ಎರಡು ಭಾಗಗಳನ್ನಾಗಿ ವಿಂಗಡಿಸಿಕೊಂಡಿದ್ದೇನೆ. ಮೊದಲನೆಯ ಭಾಗದಲ್ಲಿ ಹೆಚ್ಚು ಸ್ಥಳವನ್ನಪೇಕ್ಷಿಸದ ಉತ್ತರಗಳನ್ನು ಕೊಟ್ಟಿದ್ದೇನೆ. ಎರಡನೆಯ ಭಾಗದಲ್ಲಿ ವಿದ್ವಾನ್ ರಂಗನಾಥ ಶರ್ಮಾ ಅವರ ಟೀಕೆಗಳಿಗೆ ನೇರವಾದ ಉತ್ತರವಿಲ್ಲ. ವರ್ಣನಾತ್ಮಕ ವ್ಯಾಕರಣದ ದೃಷ್ಟಿಯಿಂದ ಈ ಚರ್ಚೆಗೆ ಪ್ರಕೃತವಾದ ರೂಪಗಳ ಸಿದ್ಧಿ ಹೇಗಾಗುತ್ತದೆ ಎಂಬುದರ ವಿಚಾರವಾಗಿ ಕೆಲವು ಟಿಪ್ಪಣಿಗಳನ್ನು ಬರೆದಿದ್ದೇನೆ. ಒಂದು ವ್ಯಾಕರಣದ ಇತರ ಭಾಗಗಳೊಡನೆ ಸಾವಯವ ಸಂಬಂಧ ವನ್ನು ಪಡೆದಿರುವ ಈ ಅಂಶಗಳನ್ನು ಹೀಗೆ ಬೇರ್ಪಡಿಸಿ ಕೊಡುವುದರಿಂದ ಪ್ರಶ್ನೆಗಳ

ಸರಮಾಲೆಯೇ ಏಳುವ ಅಪಾಯವಿದ್ದರೂ, ವರ್ಣನಾತ್ಮಕ ವ್ಯಾಕರಣವು ಈ ಸಮಸ್ಯೆಯನ್ನು ಹೇಗೆ ಎದುರಿಸುತ್ತದೆ ಎಂಬುದರ ಸ್ಥೂಲಕಲ್ಪನೆಯಾದರೂ ದೊರೆತೀತು ಎಂಬ ನಿರೀಕ್ಷೆ ನನ್ನದು. ಎರಡನೆಯ ಭಾಗದಲ್ಲೇ ವರ್ಣನಾತ್ಮಕ ಭಾಷಾವಿಜ್ಞಾನದ ಪ್ರಕಾರ 'ಪದ' ಎಂಬುದರ ವಿವೇಚನೆ ಮಾಡಿದ್ದೇನೆ. ಇದನ್ನು ಬರೆಯುವಾಗ, ಬೆಂಗಳೂರು ವಿಶ್ವವಿದ್ಯಾಲಯವು ಪ್ರಕಟಿಸಿರುವ "ವರ್ಣನಾತ್ಮಕ ವ್ಯಾಕರಣದ ಮೂಲತತ್ತ್ವಗಳು" ಎಂಬ ನನ್ನ ಪುಸ್ತಕದಲ್ಲಿ ಬರುವ ಒಂದು ಭಾಗವನ್ನೇ ಅಲ್ಲಲ್ಲಿ ಬದಲಾಯಿಸಿ ಕೊಟ್ಟಿದ್ದೇನೆ.

೧

(1) ನಾನು ನನ್ನ ಉಪನ್ಯಾಸದ ಆರಂಭದಲ್ಲಿ "ನಮ್ಮ ಪ್ರಾಚೀನ ವ್ಯಾಕರಣಗಳಿಗೂ ವರ್ಣನಾತ್ಮಕ ಭಾಷಾವಿಜ್ಞಾನಕ್ಕೂ ಯಾವ ಪೈಪೋಟಿಯೂ ಇಲ್ಲ" ಎಂದು ಬರೆದದ್ದಕ್ಕೆ ಪ್ರತಿಕ್ರಿಯೆಯಾಗಿ "ಪೈಪೋಟಿಗೆ ನಿಲ್ಲದ ಭಾಷಾವಿಜ್ಞಾನವೇ ಕೇಶಿರಾಜನ ವ್ಯಾಕರಣ ಶಾಸ್ತ್ರದ ಸಿದ್ಧಾಂತವನ್ನು ಖಂಡಿಸುತ್ತದೆಯೆಂಬುದು ವಿಚಿತ್ರ" ಎಂಬ ಮಾತು ಬಂದಿದೆ. ಸಂಸ್ಕೃತ ವ್ಯಾಕರಣವನ್ನು ಕುರಿತು ಹುಟ್ಟಿರುವ ಅನೇಕಾನೇಕ ಗ್ರಂಥಗಳಲ್ಲಿ ಖಂಡನ ಮಂಡನಗಳು ನಡೆದಿಲ್ಲವೇನು ? ವಿದ್ವಾನ್ ರಂಗನಾಥ ಶರ್ಮಾ ಅವರೇ ಕೇಶಿರಾಜನನ್ನು ನವಿರಾದ ರೀತಿಯಲ್ಲಿ ಖಂಡಿಸಿಲ್ಲವೇನು ? "ಈತನ ಗಮಕ ಸಮಾಸದ ಲಕ್ಷಣವೇ ಅವ್ಯವಸ್ಥಿತ (29) ಎಂದು ಬರೆದಿಲ್ಲವೇನು ? ನನಗೇನೋ ಇದು ವಿಚಿತ್ರವಾಗಿ ಕಾಣುವುದಿಲ್ಲ. ಜೀವಂತವಾಗಿರುವ ಶಾಸ್ತ್ರದ ಲಕ್ಷಣ ಇದು ಎಂದು ನನಗೆ ತೋರುತ್ತದೆ. "ಪಾಣಿನೀಯ ವ್ಯಾಕರಣ ಪದ್ಧತಿಯ ಮಾನದಂಡದಿಂದ ಅಳೆದರೂ ಅಷ್ಟೇ, ಆಧುನಿಕ ವರ್ಣನಾತ್ಮಕ ಭಾಷಾವಿಜ್ಞಾನದ ಮಾನದಂಡದಿಂದ ಅಳೆದರೂ ಅಷ್ಟೇ, ಕೇಶಿರಾಜನ "ಶಬ್ದಮಣಿದರ್ಪಣ"ದ ಬೆಲೆಯೇನು ಎಂಬ ವಿಚಾರದಲ್ಲಿ ನಿರ್ಣಯ ಒಂದೇ ಆಗಿರುತ್ತದೆ" (74) ಎಂದು ನಾನು ಬರೆದಿರುವುದೂ ಇದಕ್ಕಾಗಿಯೇ.

(2) "ವ್ಯಾಕರಣ ಶಾಸ್ತ್ರ ಎಂಬುದು ವರ್ಣನಾತ್ಮಕ ಭಾಷಾವಿಜ್ಞಾನದ ಒಂದು ಶಾಖೆ' ಎಂದಿದ್ದಾರೆ ಡಾ॥ ಬಿಳಿಗಿರಿಯವರು. ಪ್ರಾಚೀನ ಕಾಲದಲ್ಲಿಯೇ ಹುಟ್ಟಿ ಬೆಳೆದು ಹೆಮ್ಮರವಾಗಿ ನಿಂತಿರುವ ವ್ಯಾಕರಣ ಶಾಸ್ತ್ರವು ಈಚೆಗೆ ಹುಟ್ಟಿ ಚಿಗುರುತ್ತಿರುವ ಭಾಷಾಶಾಸ್ತ್ರದ ಶಾಖೆಯೆನ್ನುವುದೂ ವಿಚಿತ್ರವೇ." (17) ಎಂಬ ಮಾತು. ಉದ್ಧೃತವಾದ ನನ್ನ ವಾಕ್ಯವಾದ ಕೂಡಲೇ, ಮುಂದಿನ ವಾಕ್ಯದಲ್ಲೇ "ವ್ಯಾಕರಣ ಎಂದರೇನು, ಭಾಷೆಯ ವಿಶ್ಲೇಷಣೆ ಹೇಗೆ ನಡೆಯಬೇಕು, ಉತ್ತಮ ವ್ಯಾಕರಣ ಗ್ರಂಥದ ಲಕ್ಷಣಗಳೇನು ಎಂಬ ವಿಚಾರಗಳೆಲ್ಲಾ ವರ್ಣನಾತ್ಮಕ ಭಾಷಾವಿಜ್ಞಾನದ ವ್ಯಾಪ್ತಿಯಲ್ಲೇ ಬರುತ್ತವೆ" (73–74) ಎಂದು ಬರೆದಿದ್ದೇನೆ; ವ್ಯಾಕರಣ ಶಾಸ್ತ್ರ ಎಂದರೇನು ಎಂಬುದನ್ನು ಸೂಚಿಸಿದ್ದೇನೆ. ಆ ಶಬ್ದವನ್ನು ಕೇವಲ ಸಂಸ್ಕೃತ

ವ್ಯಾಕರಣಕ್ಕೋ ಕನ್ನಡ ವ್ಯಾಕರಣಕ್ಕೋ ಸೀಮಿತಗೊಳಿಸದೆ ವಿಶಾಲವಾದ ಅರ್ಥದಲ್ಲಿ ಬಳಸಿದ್ದೇನೆ. ಸಂಸ್ಕೃತ ವ್ಯಾಕರಣ ಕ್ಷೇತ್ರದಲ್ಲಿ ಹುಟ್ಟಿರುವ ಕೆಲವು ಮಹಾಗ್ರಂಥಗಳಲ್ಲಿ ಈ ವಿಚಾರಗಳ ಪ್ರಸ್ತಾಪ ಬಂದೇ ಇದೆ ಎಂಬುದನ್ನು ಮರೆಯಬಾರದು.

(3) ಕೇಶಿರಾಜನ ಹಾಗೂ ಭಟ್ಟಾಕಲಂಕನ ಸೂತ್ರಾರ್ಥಗಳನ್ನು ಹೋಲಿಸಿ "ಪರಿಸ್ಥಿತಿ ಹೀಗಿರುವಾಗ 'ಗಮಕ ಸಮಾಸವು ಸಮಾಸವೇ ?' ಎಂಬ ಪ್ರಶ್ನೆಯೇ ಅಸಂಗತ ; 'ಸಂಖ್ಯಾ ಸರ್ವನಾಮ ಗುಣವಚನ ಕೃದಂತ ಪೂರ್ವಕವಾದ ಸಮಾಸವು ಸಮಾಸವೇ ?' ಎಂದಿಷ್ಟೇ ಪ್ರಶ್ನೆಯಾಗಿ ಉಳಿಯುತ್ತದೆ" (22) ಎಂದಿರುವ ಮಾತು. 'ಗಮಕ ಸಮಾಸ' ಎಂದರೇನು ಎಂಬುದು ಕೇಶಿರಾಜನನ್ನು ಓದಿದವರಿಗೆಲ್ಲಾ ಗೊತ್ತು. ಬಾರಿಬಾರಿಗೂ 'ಸಂಖ್ಯಾ ಸರ್ವನಾಮ ಗುಣವಚನ ಕೃದಂತ ಪೂರ್ವಕವಾದ ಸಮಾಸ' ಎಂದು ಹೇಳುವುದನ್ನು ತಪ್ಪಿಸಲು 'ಗಮಕ ಸಮಾಸ' ಎಂಬ ಶಬ್ದವನ್ನು ಬಳಸಿದರೆ ತಪ್ಪೇನು? 'ಗಮಕ ಸಮಾಸ' ಎಂಬ ಹೆಸರಿನ ಅಡಿಯಲ್ಲಿ ಬರುವ ರೂಪಗಳು ಸ್ವತಂತ್ರವಾದ ಸಮಾಸ ಪ್ರಕಾರವೆಂದು ಒಪ್ಪುವವರು, ಆ ರೂಪಗಳು ಸಮಾಸಗಳೆಂದು ಒಪ್ಪಿದರೂ ಅವುಗಳು ಸ್ವತಂತ್ರವಾದ ಸಮಾಸ ಪ್ರಕಾರವೆಂದು ಒಪ್ಪದವರು, ಆ ರೂಪಗಳು ಸಮಾಸಗಳೇ ಅಲ್ಲ ಎಂದು ವಾದಿಸುವವರು—ಇವರೆಲ್ಲರೂ 'ಗಮಕ ಸಮಾಸ' ಎಂಬ ಶಬ್ದವನ್ನು ಉಪಯೋಗಿಸಬಹುದು. ಮೇಲೆ ತಿಳಿಸಿದ ಮೂರು ಪಕ್ಷಗಳಲ್ಲಿ ಎರಡನೆಯ ಪಕ್ಷಕ್ಕೆ ಸೇರಿದ ವಿದ್ವಾನ್ ರಂಗನಾಥ ಶರ್ಮಾ ಅವರೇ "ಗಮಕ ಸಮಾಸವು ಸಮಾಸವೇ ಹೌದು" (29) ಎಂದು ಬರೆದಿದ್ದಾರೆ. ಈ ಹೇಳಿಕೆ ಅಸಂಗತವಲ್ಲದಿದ್ದರೆ "ಗಮಕ ಸಮಾಸವು ಸಮಾಸವೇ ?" ಎಂಬ ಪ್ರಶ್ನೆ ಹೇಗೆ ಏಕೆ ಅಸಂಗತವೋ ತಿಳಿಯದು.

(4) "ಕೇಶಿರಾಜನು ಉದಾಹರಿಸಿದ ಇರ್ಪತ್ತೈದು, ನೂಱುಪತ್ತು, ಮೂವತ್ತಾರು–ಈ ಶಬ್ದಗಳು ಸಮಾಸವಲ್ಲವೆಂಬುದಕ್ಕೆ ಯಾವ ಉಪಪತ್ತಿಯನ್ನೂ ತಿಳಿಸಿಲ್ಲ. ಏಕಪಕ್ಷೀಯವಾಗಿ ಇವು ಸಮಾಸವಲ್ಲವೆಂದು ತೀರ್ಪನ್ನಿತ್ತು, ಹತ್ತುಸಾವಿರ, ಎಂಟು ನೂರು–ಇವು ಸಮಾಸಗಳೇ ಎಂದು ಒಪ್ಪಿಕೊಂಡಿರುವುದು ತುಂಬ ವಿಚಿತ್ರವಾಗಿದೆ" (23). ಕೃದಂತ ವಿಶೇಷಣ, ಸರ್ವನಾಮ, ಗುಣವಚನ–ಇವುಗಳು ಪೂರ್ವಪದವಾಗಿರುವ ಗಮಕ ಸಮಾಸಗಳು ಸಮಾಸಗಳೇ ಅಲ್ಲ ಎಂದು ವಾದಿಸುವಾಗ ಕಂಡು ಬಂದಿರುವ ಆತ್ಮವಿಶ್ವಾಸ, ಸಂಖ್ಯಾವಾಚಕಗಳನ್ನು ಕುರಿತು ನಾನು ಬರೆಯುವಾಗ ಕಂಡುಬರುವುದಿಲ್ಲ ಎಂಬುದನ್ನು ಗಮನಿಸಬೇಕು. "ಈ ವಿಚಾರವಾಗಿ ನಾನು ಮಂಡಿಸಿರುವುದನ್ನು ಒಂದು ವಾದ ಎನ್ನುವುದಕ್ಕಿಂತ, ಒಂದು ಸಲಹೆಯ ರೂಪದಲ್ಲಿ ಬೀಜಪ್ರಾಯವಾಗಿರುವ ವಾದ ಎನ್ನಬಹುದೋ ಏನೋ." (87) ಎಂದಿದ್ದೇನೆ. **ನೂಱುಪತ್ತು** (**ನೂಳುಪತ್ತು** ಎಂಬ ರೂಪ ಸರಿಯಾದುದಲ್ಲ) ಎಂಬುದರ ವಿಘಟನೆ **ನೂಱುಱುಪತ್ತು** ಎಂದಾಗುತ್ತದೆ ಎಂಬುದನ್ನು ಕೇಶಿರಾಜನೇ ಸೂಚಿಸಿದ್ದಾನೆ ಎಂಬ ಸಂಗತಿಯನ್ನು ತಿಳಿಸಿದ್ದೇನೆ: ಅದರಂತೆಯೇ **ಇರ್ಪತ್ತುಱ ಐದು** ಎಂಬುದು **ಇಪ್ಪತ್ತ**

**ಐದು** ಎಂದೂ **ಮೂವತ್ತಱ ಆಱು** ಎಂಬುದು **ಮೂವತ್ತ ಆಱು** ಎಂದೂ ಆಗುತ್ತವೆ ಎಂದು ಸೂಚಿಸಿದ್ದೇನೆ – ಹಾಗೆಂದು ಬೇರೆಯಾಗಿ ಹೇಳದಿದ್ದರೂ. **ಇರ್ಪತ್ತ** ಹಾಗೂ **ಮೂವತ್ತ** ಎಂಬವುಗಳ ಅಂತ್ಯ ಅಕಾರವು ಲೋಪವಾಗುತ್ತದೆ ಎಂಬುದನ್ನು ಸೂಚಿಸಿದ್ದೇನೆ. ಸಂಖ್ಯಾವಾಚಕ ಪೂರ್ವಕ ಗಮಕ ಸಮಾಸವು ಸಮಾಸವಲ್ಲ ಎನ್ನುವುದಕ್ಕೆ ಅಂಥ ಸಮಾಸಗಳ ನಡುವೆ ಕಾಣುವ ಈ ಅಕಾರವನ್ನು ನೆರವಿಗೆ ತೆಗೆದುಕೊಳ್ಳಬಹುದು ಎಂಬ ಸಲಹೆಯನ್ನಿತ್ತಿದ್ದೇನೆ. ಇದನ್ನು ವಿದ್ವಾಂಸರು ಸ್ವೀಕರಿಸಬಹುದು. ಸ್ವೀಕರಿಸದಿರಬಹುದು. ಅದು ಬೇರೆ ಮಾತು.

(5) "ಆವ ಮಾತು, ಆವ ಕಾರ್ಯಂ, ಆವ ನಾಯಕಂ, ಆವಕಾಂತೆ. ಡಾ|| ಬಿಳಿಗಿರಿಯವರು ಈ ಉದಾಹರಣೆಗಳನ್ನು ಪರಿಶೀಲಿಸಿಲ್ಲ. ತಮ್ಮ ಅನುಕೂಲಕ್ಕಾಗಿ ಕೈಬಿಟ್ಟಿರಬಹುದು" (24) ಎಂಬ ಮಾತು. ಕಡೆಯ ವಾಕ್ಯದ ಅಭಿಪ್ರಾಯವಂತೂ ಅನುದಾರವಾದದ್ದು ಎಂದು ಹೇಳಬೇಕು. ವಿದ್ವಾನ್ ರಂಗನಾಥ ಶರ್ಮಾ ಅವರು ಆಡಿರುವ ಇನ್ನಾವ ಮಾತಿನಿಂದಲೂ ನನಗೆ ನೋವುಂಟಾಗಲಿಲ್ಲ. ಈ ಮಾತು ನೋವನ್ನುಂಟು ಮಾಡಿದೆ. ಇದು ನನ್ನ ಶಾಸ್ತ್ರೀಯ ಪ್ರಾಮಾಣಿಕತೆಯನ್ನೇ ಪ್ರಶ್ನಿಸುವ ಮಾತಾಗಿದೆ. ಇರಲಿ. ಇಂಥ ವಾದವಿವಾದಗಳಲ್ಲಿ ಇದು ಅನಿವಾರ್ಯ ಎಂದುಕೊಂಡು ಈ ವಿಷಯವನ್ನು ಮರೆಯಬಹುದು. ಸರ್ವನಾಮಗಳು ಪೂರ್ವಪದವಾಗಿರುವ ಗಮಕ ಸಮಾಸವು ಸಮಾಸವೇ ಅಲ್ಲ ಎಂದು ತೋರಿಸಬೇಕಾಗಿರುವಾಗ, ಕೇಶಿರಾಜನು ಹೇಳಿರುವ ಸರ್ವನಾಮಗಳೆಲ್ಲವನ್ನೂ ಪರಿಶೀಲಿಸಬೇಕೆಂದು ನಿಯಮವೇನೂ ಇಲ್ಲವಲ್ಲ? ಒಂದೆರಡು ಸರ್ವನಾಮಗಳನ್ನು ಪರಿಶೀಲಿಸಿ ತೀರ್ಮಾನಕ್ಕೆ ಬಂದರೆ ಸಾಲದೇ, ಬರುವುದಕ್ಕೆ ಸಾಧ್ಯವಿಲ್ಲವೇ? ನಾನು ಬಳಸಿರುವ ವಾದದಲ್ಲಿ **ಪೆಱತು, ಪೆಱದು, ಏನ್** ಎಂಬ ಸರ್ವನಾಮಗಳನ್ನು ಬಳಸುವುದು ಕಷ್ಟ. ಅದೃಷ್ಟವಶಾತ್ **ಆವುದು/ಆವ** ಎಂಬುದನ್ನು ಬಳಸಬಹುದು. **ಆವ ಕರಿಯ ನೆಯ್ದಲ್. ಆವ ಅಸಿಯ ನೂಲ್, ಆವ ಕರಿಯ ಪಿರಿಯೊಡಲ್** ಎಂಬವುಗಳನ್ನು ನೋಡಬಹುದು. **ಅಲರ್ದಾ ಎಲ್ಲ ಕರಿಯ ನೆಯ್ದಲ್, ನೆರೆದೀ ಎಲ್ಲ ಗುರುಜನಂಗಳ್** ಎಂಬವುಗಳನ್ನೂ ನೋಡಬಹುದು. ಗಮಕ ಸಮಾಸವು ಸಮಾಸವೇ ಎಂದರೆ, ಇವುಗಳೂ ಸಮಾಸಗಳಾಗುತ್ತವೆ !

(6) ಸರ್ವನಾಮ ಹಾಗೂ ಗುಣವಚನ ಪೂರ್ವಪದವಾಗಿರುವ ಗಮಕ ಸಮಾಸವು ಸಮಾಸವೇ ಅಲ್ಲ ಎಂದು ತೋರಿಸಲು ನಾನು ಬಳಸಿರುವ ವಾದಕ್ರಮ ಎಂಥದೆಂದು (reductio ad absurdum) ತಿಳಿಸಿಯೇ ಇದ್ದೇನೆ (87). ಗಮಕ ಸಮಾಸವು ಸಮಾಸವೇ ಎಂದುಕೊಂಡು ಮುಂದುವರಿದರೆ **ಅಲರ್ದಾ ಕರಿಯ ನೆಯ್ದಲ್** ಮುಂತಾದ ರೂಪಗಳನ್ನೂ ಸಮಾಸಗಳೆನ್ನಬೇಕಾಗುವ ಹಾಸ್ಯಾಸ್ಪದ ಪರಿಸ್ಥಿತಿ ಬರುತ್ತದೆ ಎಂದು ಬರೆದಿದ್ದೆ. ಇದಕ್ಕೆ ಪ್ರತಿಕ್ರಿಯೆಯಾಗಿ ಬಂದಿರುವ "ಹಾಸ್ಯಕ್ಕೆ ವಿಷಯವೇನಿದೆ? ನಗು ಬರಲು ಕಾರಣವೇನು?" ಎಂಬ ಮಾತು.

ಕನ್ನಡದಲ್ಲಿ ಎರಡು ಪ್ರಕೃತಿಗಳಿರುವ ಸಮಾಸಗಳೇ ಅಧಿಕಸಂಖ್ಯೆಯಲ್ಲಿವೆ. ಮೂರು ಪ್ರಕೃತಿಗಳಿರುವ ಸಮಾಸಗಳ ಕೆಲವು ಉದಾಹರಣೆಗಳನ್ನು ಕಷ್ಟಪಟ್ಟು ಹುಡುಕ ಬಹುದು (ಈ ಮಾತು ದ್ವಂದ್ವಸಮಾಸಕ್ಕೆ ಅನ್ವಯಿಸುವುದಿಲ್ಲ). ನಾಲ್ಕು ಅಥವಾ ಐದು ಪ್ರಕೃತಿಗಳಿರುವ ಸಮಾಸಗಳು ಇಲ್ಲವೇ ಇಲ್ಲವೇನೋ ಎಂಬಷ್ಟು ಕಡಮೆಸಂಖ್ಯೆ ಯಲ್ಲಿವೆ. ಕೂಡಲೇ ನನ್ನ ನೆನಪಿಗೆ ಬರುವ ಅಂಥ ಸಮಾಸವೆಂದರೆ ನಾನೇ ಹಾಸ್ಯ ಕ್ಕಾಗಿ ರಚಿಸಿದ್ದು : **ನಸುಗೆಂದಲೆ ಕರ್ಬಾವು.** ದೊಡ್ಡ ದೊಡ್ಡ ಸಮಾಸಗಳೇ ಕನ್ನಡದ ಜಾಯಮಾನಕ್ಕೆ ವಿರುದ್ಧ. ಆದ್ದರಿಂದ **ಮಿಸುಪಾ ಕರಿಯ ಪಿರಿಯೊಡಲ್** ಎಂಬು ದನ್ನು ಅದು ವಿಚಿತ್ರವಾದ ರೂಪವೆನಿಸದಿದ್ದರೂ ಸಮಾಸವೆಂದು ಕರೆಯಲು ಕಸಿವಿಸಿ ಯಾಗುತ್ತದೆ. **ನಸುಗೆಂಪು, ಕೆಂದಲೆ, ಕರ್ಬಾವು** ಮುಂತಾದ ಸಮಾಸಗಳ ಪರಿಚಯ ವಿರುವವರಿಗೆ **ನಸುಗೆಂದಲೆ ಕರ್ಬಾವು** ಎಂಬುದು ಸೂತ್ರಕ್ಕೆ ಸರಿಯಾಗಿ ಸಮಾಸವಾಗಿ ದ್ದರೂ, ವಿಚಿತ್ರವೆನಿಸುತ್ತದೆ, ನಗು ಬರುತ್ತದೆ. ಇಂಥ ಕಸಿವಿಸಿಗಳಿಗೆ ಎಸಿಸಿಕೆಗಳಿಗೆ ವ್ಯಾಕರಣದಲ್ಲಿ ಸ್ಥಾನವಿಲ್ಲ ಎಂಬುದು ಬಹುಮಟ್ಟಿಗೆ ನಿಜವೇ. ಆದರೆ ಇಂಥ ಸನ್ನಿವೇಶಗಳಲ್ಲಿ ವ್ಯಾಕರಣಕಾರ ತನಗೆ ಏಕೆ ಕಸಿವಿಸಿಯಾಗುತ್ತಿದೆ ಎಂಬುದನ್ನು ಕುರಿತು ಯೋಚಿಸಿದರೆ ಗೊತ್ತಾಗುವ ಅಂಶವಿದು : ಕನ್ನಡ ಸಮಾಸ ರಚನೆಯ ಪ್ರವೃತ್ತಿಗೆ (tendency) ವಿರುದ್ಧವಾಗಿ ಹೋಗುವ ಯಾವ ಸೂತ್ರವೇ ಆಗಲಿ ಹಾಸ್ಯಾಸ್ಪದ ಪರಿಣಾಮಗಳನ್ನುಂಟು ಮಾಡುತ್ತದೆ. ಇಷ್ಟರೂಪ ಸಿದ್ಧಿ ಅನಿಷ್ಟ ರೂಪ ನಿವಾರಣೆ ಆದರೆ ಸಾಕು ಎನ್ನುವಂತಿಲ್ಲ. ಇಷ್ಟರೂಪ ಸಿದ್ಧಿಯಾಗುವ ರೀತಿ ಕೂಡ ವಾಸ್ತವಿಕ ವಾಗಿರಬೇಕು, ಸಹಜವಾಗಿರಬೇಕು—ಎಂದರೆ ಭಾಷೆಯ ಶಬ್ದರಚನಾಪ್ರವೃತ್ತಿಗೆ ಅವಿರುದ್ಧವಾಗಿರಬೇಕು.

(7) "ಕೃದಂತ ಪೂರ್ವಕ ಗಮಕ ಸಮಾಸಕ್ಕೆ ಕೇಶಿರಾಜನು ಕೊಟ್ಟಿರುವ ಉದಾಹರಣೆ ಗಟ್ಟಿಯಾದವಲ್ಲ. ಇಷ್ಟು ಮಾತ್ರದಿಂದ ಉಳಿದ ಸಂಖ್ಯಾಗುಣವಾಚಿನ ಸರ್ವನಾಮ ಪೂರ್ವಕವಾದ ಉದಾಹರಣೆಗಳಲ್ಲಿಯೂ ಸಮಾಸವಾಗಿಲ್ಲ ಎಂಬುದು ಸಾಹಸದ ಮಾತು" (28–29) ಎಂಬ ಮಾತು. ಸಂಖ್ಯಾಪೂರ್ವಕವಾದ ಗಮಕ ಸಮಾಸವನ್ನು ಬಿಟ್ಟರೆ, ನನ್ನ ವಾದಗಳು ಪ್ರಬಲವಾಗಿವೆ ಎಂದು ನನ್ನ ನಂಬಿಕೆ : ಪ್ರಬಲವೋ ದುರ್ಬಲವೋ, ವಾದಗಳನ್ನಂತೂ ಮಂಡಿಸಿದ್ದೇನೆ. ಆದ್ದರಿಂದ "ಇಷ್ಟು ಮಾತ್ರದಿಂದ" ಎಂಬ ಮಾತು ಸಖೇದಾಶ್ಚರ್ಯವನ್ನುಂಟು ಮಾಡಿದೆ ಎಂದಷ್ಟೇ ಹೇಳಬಲ್ಲೆ.

(8) ಭಾಷಾಶಾಸ್ತ್ರದ ಹಿನ್ನೆಲೆಯಲ್ಲಿ ಯಾವುದೋ ಅಭಿಪ್ರಾಯವನ್ನಿಟ್ಟು ಕೊಂಡು ಮಾತುಗಳನ್ನವರು ಹೆಣೆಯುತ್ತಾರೆ. ನಮಗೆ ಅರ್ಥವಾಗುವುದಿಲ್ಲ. ವ್ಯಾಕರಣಶಾಸ್ತ್ರದಲ್ಲಿ ವ್ಯಾಕರಣದ ಪರಿಭಾಷೆಯನ್ನು ಬಳಸಿದರೆ ಅರ್ಥವಾದೀತು" (29) ಎಂಬ ಮಾತು. ಒಂದೇ ವಿಷಯವನ್ನು ಅಭ್ಯಸಿಸುವ, ಆದರೆ ಬೇರೆ ಬೇರೆ ಚೌಕಟ್ಟುಗಳಿಗೆ ಸೇರಿದ ಎರಡು ಪಂಥಗಳ ನಡುವೆ ನಡೆಯುವ ಚರ್ಚೆಯಲ್ಲಿ ಇದು

ಅನಿವಾರ್ಯ. ತಾವು ಯೋಚಿಸುವ ಚೌಕಟ್ಟನ್ನು ಬಿಟ್ಟುಕೊಡದೆಯೇ, ತಾತ್ಕಾಲಿಕವಾಗಿ ಅದರಿಂದ ಹೊರಬಂದು ಬೇರೆ ಚೌಕಟ್ಟಿನಲ್ಲಿರುವವನು ಏನು ಹೇಳುತ್ತಾನೆ ಎಂಬುದನ್ನು ತಿಳಿದುಕೊಳ್ಳಲು ಪ್ರಯತ್ನಿಸುವುದೇ ಇದಕ್ಕಿರುವ ಪರಿಹಾರೋಪಾಯ. ಈ ಉಪಾಯವನ್ನು ಉಪಯೋಗಿಸಿರುವುದರಿಂದಲೇ, ವಿದ್ವಾನ್ ರಂಗನಾಥ ಶರ್ಮಾ ಅವರ ಮಾತುಗಳನ್ನು ಅರ್ಥಮಾಡಿಕೊಳ್ಳಲು ನನಗೆ ಸಾಧ್ಯವಾಗಿರುವುದು.

(9) "ಋಣಾತ್ಮಕವಾದ ಉಪಾಯ, ಧನಾತ್ಮಕವಾದ ತತ್ತ್ವ ಇತ್ಯಾದಿ ಶಬ್ದಗಳನ್ನು ಅರ್ಥಮಾಡಿಕೊಳ್ಳುವುದು ಕಷ್ಟ" (29) ಎಂಬ ಮಾತು. ಅದರೂ ಲೇಖನದ ಕೊನೆಯಲ್ಲಿ ಅಲುಕ್ ಸಮಾಸವನ್ನು ಕುರಿತು ಬರೆಯುವಾಗ "ಭಾಷಾಶಾಸ್ತ್ರವವರ ಋಣತತ್ತ್ವ ಧನತತ್ತ್ವಗಳ ಆಟವೇನೂ ಇಲ್ಲಿ ಸಾಗದು" (32) ಎಂಬ ಮಾತು ಬಂದಿದೆ! ನಾನು ನನ್ನ ಉಪನ್ಯಾಸದಲ್ಲಿ ಪ್ರಸ್ತಾಪಸಿರುವುದು ಪ್ರಕೃತ ಸಂದರ್ಭಕ್ಕೆ ಬೇಕಾದ ತತ್ತ್ವಗಳನ್ನು ಮಾತ್ರ. ಅಲುಕ್ ಸಮಾಸವನ್ನು ಭಾಷಾಶಾಸ್ತ್ರಿಗಳು ಸಮಾಸವೆಂದೇ ಕರೆಯುತ್ತಾರೆ. ನಿಸ್ಸಂದೇಹವಾಗಿ ಸಮಾಸಗಳಾಗಿರುವವುಗಳ ಆಧಾರದ ಮೇಲೆ, ವಿಭಕ್ತಿ ಪ್ರತ್ಯಯಲೋಪವಾಗಿರದಿದ್ದರೂ ಆ ರೂಪಗಳು ಮಿಕ್ಕ ಸಮಾಸಗಳಂತೆಯೇ ವರ್ತಿಸುತ್ತವೆಯಾದ್ದರಿಂದ ಅವುಗಳನ್ನೂ ಸಮಾಸಗಳೆಂದು ಕರೆಯಬಹುದು. ಈ ವರ್ತನೆಯೆಂತಹುದು ಎಂಬುದನ್ನು ವಿದ್ವಾನ್ ರಂಗನಾಥ ಶರ್ಮಾ ಅವರೇ ತಿಳಿಸಿದ್ದಾರೆ.

(10) " 'ಸೀತೆ ಗಾಜಿನ ಬಳೆ ಒಡೆದು ಹಾಕಿದಳು' ಎಂಬ ವಾಕ್ಯದಲ್ಲಿ 'ಸೀತೆ ಗಾಜಿನ' ಎಂಬುದು ಈ ವಾಕ್ಯದ ಅಂಗವೇ ಅಲ್ಲ ಎಂದು ಬರೆದಿದ್ದಾರೆ. ವ್ಯಾಕರಣ ಶಾಸ್ತ್ರ ಪ್ರಕಾರ ಎಲ್ಲ ಶಬ್ದಗಳೂ ಆಯಾ ವಾಕ್ಯದ ಅಂಗಗಳೇ" (29) ಎಂಬ ಮಾತು. **ಸೀತೆ ಗಾಜಿನ** ಎಂಬುದು ಶಬ್ದವೇ ? ಇರಲಿ. ವರ್ಣನಾತ್ಮಕ ವ್ಯಾಕರಣದ ಒಂದು ಪಾರಿಭಾಷಿಕ ಶಬ್ದವನ್ನು ವಿವರಿಸದೆ ಇದ್ದುದರಿಂದ ಈ ಟೀಕೆ ಬಂದಿದೆ. **ಸೀತೆ, ಗಾಜು, (ಇನ್) ಅ, ಬಳೆ, ಒಡೆ, ದು, ಹಾಕು, (ಇ)ದ್, ಅಳು, ಗಾಜಿನ ಬಳೆ ಒಡೆದು ಹಾಕಿದಳು, ಗಾಜಿನ ಬಳೆ, ಒಡೆದು ಹಾಕಿದಳು, ಗಾಜಿನ, ಒಡೆದು, ಹಾಕಿದಳು** ಎಂಬವುಗಳೆಲ್ಲವೂ ಪ್ರಕೃತ ವಾಕ್ಯದ ಅಂಗಗಳು. **ಸೀತೆ ಗಾಜಿನ** ಎಂಬುದು ಅಂಗವಲ್ಲ. ( ಈ ವಿಚಾರವಲ್ಲಿ ಹೆಚ್ಚು ತಿಳಿಯುವ ಕುತೂಹಲವಿರುವವರು ಈ ಲೇಖನದ ಮೊದಲಿನಲ್ಲಿ ಹೆಸರಿಸಿರುವ ನನ್ನ ಪುಸ್ತಕವನ್ನು ಓದಬಹುದು.)

(11) " 'ಪ್ರಕೃತಿಗಳ ಅನುಪೂರ್ವಿ ಕೇವಲ ಅನುಪೂರ್ವಿಯೋ ಅಥವಾ ಸಮಾಸವೋ ಎಂದು ತಿಳಿದುಕೊಳ್ಳಲು ವರ್ಣನಾತ್ಮಕ ಭಾಷಾವಿಜ್ಞಾನಿಗಳು ಕೆಲವು ಉಪಾಯಗಳನ್ನು ಅಥವಾ ತತ್ತ್ವಗಳನ್ನು' ಬಳಸುತ್ತಾರಂತೆ (75-76). ಈ ದೃಷ್ಟಿಯೇ ವ್ಯಾಕರಣ ಶಾಸ್ತ್ರಕ್ಕೆ ಸಂಮತವಲ್ಲ. ಭೂಮಿಯಲ್ಲಿ ಕಬ್ಬಿಣವೋ ತಾಮ್ರವೋ ಹುದುಗಿಕೊಂಡಿರುವಂತೆ ಸಮಾಸ ಎಂಬ ಒಂದು ವಸ್ತು ಭಾಷೆಯಲ್ಲಿ ಹುದುಗಿಕೊಂಡಿರುವುದಿಲ್ಲ. ಸಮಾಸ ಎಂಬುದು ಒಂದಾನೊಂದು ಸಂಜ್ಞೆಯೆಂದು

ಹಿಂದೆ ಹೇಳಲಾಗಿದೆ. ವ್ಯಾಕರಣ ಶಾಸ್ತ್ರವು ಇದು ಸಮಾಸವೆಂದರೆ ಸಮಾಸ, ಅಲ್ಲವೆಂದರೆ ಅಲ್ಲ. ಈ ಸಂಜ್ಞೆಯನ್ನಿಟ್ಟದ್ದಕ್ಕೆ ಪ್ರಯೋಜನವೇನೆಂದು ಮಾತ್ರ ಯಾರು ಬೇಕಾದರೂ ಪರೀಕ್ಷಿಸಬಹುದು" (29–30) ಎಂಬ ಮಾತು. ನಿಜವಾಗಿಯೂ ಸಂಸ್ಕೃತದ ಅಭ್ಯಾಸಿಗಳು ಎಷ್ಟು ಅದೃಷ್ಟಶಾಲಿಗಳು! ಇದುವರೆಗೂ ಯಾರೂ ಯಾವುದೇ ಭಾಷೆಯ ಮೇಲೂ ರಚಿಸದಂಥ ಅದ್ಭುತವಾದ ವ್ಯಾಕರಣವನ್ನು ಪಾಣಿನಿಯು ರಚಿಸಿಟ್ಟಿದ್ದಾನೆ. ಮಹಾಧೀಮಂತನಾದ ಪತಂಜಲಿಯು ಬರೆದ ಮಹಾಭಾಷ್ಯವಿದೆ. ದೊಡ್ಡ ದೊಡ್ಡ ವಿದ್ವಾಂಸರುಗಳು ಬರೆದ ವಾರ್ತಿಕಗಳಿವೆ, ವೃತ್ತಿಗಳಿವೆ. ವ್ಯಾಖ್ಯಾನಗಳಿವೆ. ಖಂಡನ ಮಂಡನಗಳು ನಡೆದಿವೆ. ಎಲ್ಲಾ ನಿರ್ಣಯಗಳನ್ನೂ ವ್ಯಾಕರಣ ಶಾಸ್ತ್ರವೇ ಮಾಡಿಟ್ಟಿದೆ. ಇಂಥ ಅನುಕೂಲವಿರುವವರು, ಸಮಾಸವೆಂಬುದು ಒಂದು ಸಂಜ್ಞೆ, ವ್ಯಾಕರಣ ಶಾಸ್ತ್ರವು ಇದು ಸಮಾಸವೆಂದರೆ ಸಮಾಸ, ಅಲ್ಲವೆಂದರೆ ಅಲ್ಲ, ಸಂಜ್ಞಾವಿಧಾನದ ಪ್ರಯೋಜನವೇನು ಎಂಬ ಪ್ರಶ್ನೆಯಷ್ಟೇ ಉಳಿಯುತ್ತದೆ ಎನ್ನಬಹುದೋ ಏನೋ! ಹಾಗೆನ್ನುವುದು ಸರಿಯಲ್ಲ ಎಂದೇ ನನ್ನ ಅಭಿಪ್ರಾಯ. ಆದರೆ ಈ ಅಭಿಪ್ರಾಯದ ಸಮರ್ಥನೆಗೆ ಹೊರಡದೆ, ನನ್ನ ಪ್ರಕೃತೋದ್ದೇಶಕ್ಕೆ ಬೇಕಾಗಿರುವಷ್ಟನ್ನು ಮಾತ್ರ ಬರೆಯುತ್ತೇನೆ. ಪಾಣಿನಿಗೂ ಹಿಂದೆ ಸಂಸ್ಕೃತ ಭಾಷೆಯನ್ನು ಕುರಿತು ಸಾಕಷ್ಟು ಅಭ್ಯಾಸ ನಡೆದಿತ್ತು ಎನ್ನುತ್ತಾರೆ. ಪಾಣಿನಿಗೂ ಇದ್ದ ಇಂಥ ಅನುಕೂಲವಿಲ್ಲದ, ಇದುವರೆಗೂ ಯಾರೂ ಅಭ್ಯಸಿಸದೇ ಇರುವ ಭಾಷೆಯೊಂದರ ಮೇಲೆ ವ್ಯಾಕರಣವನ್ನು ರಚಿಸಹೊರಟಿರುವ ವ್ಯಾಕರಣಕಾರ ಏನು ಮಾಡಬೇಕು? ಇಂಥ ವ್ಯಾಕರಣಕಾರನಿಗಿರುವ ಆಸ್ತಿ ಎಂದರೆ ಸಾಮಾನ್ಯ ಭಾಷಾ ವಿಜ್ಞಾನದ ಜ್ಞಾನ. ಸಂಸ್ಕೃತ ಮುಂತಾದ ಭಾಷೆಗಳ ಮೇಲಿರುವ ವ್ಯಾಕರಣಗಳ ಪರಿಚಯ ಹಾಗೂ ಭಾಷಾ ವಿಶ್ಲೇಷಣೆಗೆ ಸಂಬಂಧಿಸಿದ ಕೆಲವು ಉಪಾಯಗಳು. ಈ ಉಪಾಯಗಳನ್ನೂ ಯಾಂತ್ರಿಕವಾಗಿ ಬಳಸುವಂತಿಲ್ಲ. ಇಂಥ ವ್ಯಾಕರಣಕಾರನಿಗೆ ಸಮಾಸ ಎಂದು ಕರೆಯಬಹುದಾದ ರೂಪಗಳು ಸಾಧಾರಣವಾಗಿ ಹೆಚ್ಚೋ ಕಡಿಮೆಯೋ ಸಂಖ್ಯೆಯಲ್ಲಿ ಎಲ್ಲಾ ಭಾಷೆಗಳಲ್ಲೂ ಇರುತ್ತವೆ ಎಂದು ಗೊತ್ತಿರುತ್ತದೆ. ಇಂಥ ವ್ಯಾಕರಣಕಾರನಿಗೆ ಸಮಾಸ ಎನ್ನುವುದು ಬರಿಯ ಹೆಸರಲ್ಲ. ಯಾವುದೋ ಒಂದು ವಿಶಿಷ್ಟವಾದ ರಚನೆಯುಳ್ಳ ರೂಪಕ್ಕೆ ತಾನು ಕೊಡಬೇಕಾಗಿರುವ ಹೆಸರು. ವಿದ್ವಾನ್ ರಂಗನಾಥ ಶರ್ಮಾ ಅವರು ಬರೆದಿರುವುದು ಸಿದ್ಧವಾಗಿರುವ ವ್ಯಾಕರಣ ಶಾಸ್ತ್ರವನ್ನು ಕುರಿತು. ನಾನು ಬರೆದಿರುವುದು ಸಿದ್ಧವಾಗಬೇಕಾಗಿರುವ ಅಥವಾ ಸುಧಾರಿತವಾಗಬೇಕಾಗಿರುವ ವ್ಯಾಕರಣ ಶಾಸ್ತ್ರವನ್ನು ಕುರಿತು. ಕನ್ನಡ ವ್ಯಾಕರಣ ಶಾಸ್ತ್ರವು, ಅಂಥ ವಸ್ತು ಇರುವುದೇ ಆಗಿದ್ದರೆ, ಸುಧಾರಿತವಾಗಬೇಕಾಗಿದೆ. ಈಗಿರುವುದು ಸಂಸ್ಕೃತ ವ್ಯಾಕರಣದ ಕಪಾಟು ಕಟ್ಟಿಕೊಂಡು ನಡೆಯುತ್ತಿರುವ ವ್ಯಾಕರಣ ಗ್ರಂಥಗಳು. ಸಂಸ್ಕೃತದಿಂದ ಕನ್ನಡಕ್ಕೆ ಎಷ್ಟೋ ಉಪಕಾರವಾಗಿದೆ. ನಿಜ. ಆದರೆ ಅಪಕಾರವೂ ಆಗಿದೆ. ಈ ಅಪಕಾರ ಎನ್ನುವುದು ವ್ಯಾಕರಣ ಕ್ಷೇತ್ರದಲ್ಲಿ ಆಗಿರುವಷ್ಟು

ಬಹುಶಃ ಬೇರೆ ಯಾವ ಕ್ಷೇತ್ರದಲ್ಲೂ ಆಗಿಲ್ಲ. ಹಾಗೆ ನೋಡಿದರೆ ಸಂಸ್ಕೃತವನ್ನಾಗಲಿ ಸಂಸ್ಕೃತ ವ್ಯಾಕರಣ ಶಾಸ್ತ್ರವನ್ನಾಗಲಿ ನಿಂದಿಸುವುದೇ ತಪ್ಪು. ಅವುಗಳನ್ನು ಕಣ್ಣು ಮುಚ್ಚಿಕೊಂಡು ಅನುಸರಿಸಿದ ಕನ್ನಡ ವ್ಯಾಕರಣಕಾರನನ್ನು ನಿಂದಿಸಬೇಕು. ಪರಿಸ್ಥಿತಿ ಎಲ್ಲಿಗೆ ಹೋಗಿದೆಯೆಂದರೆ, ಸಂಸ್ಕೃತ ವ್ಯಾಕರಣದ ಅಂಧಾನುಸರಣೆಯಿಂದ ಕನ್ನಡ ವ್ಯಾಕರಣಗಳಲ್ಲಿ ಉಂಟಾಗಿರುವ ವಿಕಾರಗಳನ್ನು ಎತ್ತಿ ತೋರಿಸಿದರೆ, ಭಾಷಾಶಾಸ್ತ್ರದವರ ಆಕ್ಷೇಪಣೆಗಳಿಗೆ ಸಂಸ್ಕೃತ ವ್ಯಾಕರಣದಲ್ಲಿ ಹಲವಾರು ಉತ್ತರಗಳುಂಟು ಎಂಬ ಉತ್ತರ ಬರುತ್ತದೆ! ಸಂಸ್ಕೃತ ವ್ಯಾಕರಣದಲ್ಲಿ ಕಂಡುಬರುವ ಒಂದು ಪ್ರಕ್ರಿಯೆಯನ್ನು ಕುರಿತು "ಎಂಥ ಸುಂದರವಾದ ('ಸುಂದರವಾದ' ಎಂಬುದು ಇಷ್ಟವಿಲ್ಲದಿದ್ದರೆ 'ಅದ್ಭುತವಾದ' ಎಂದಿಟ್ಟುಕೊಳ್ಳಿ) ಪ್ರಕ್ರಿಯೆಯಿದು" ಎಂದು ಮೆಚ್ಚಿ ಕೊಂಡಾಡುವವನೇ ಅದೇ ಪ್ರಕ್ರಿಯೆಯನ್ನು ಕನ್ನಡ ವ್ಯಾಕರಣದಲ್ಲಿ ಕಂಡರೆ ಅಸಹ್ಯಪಟ್ಟುಕೊಳ್ಳಬಹುದು. ಸಂಸ್ಕೃತ ವ್ಯಾಕರಣದ ಅಂಧಾನುಸರಣೆಯಿಂದ ಕನ್ನಡ ವ್ಯಾಕರಣಗಳಲ್ಲಿ ತಲೆದೋರಿರುವ ವಿಕಾರಗಳನ್ನು ವರ್ಗೀಕರಿಸಿ, ಒಂದೊಂದು ವರ್ಗಕ್ಕೂ ಸೇರುವ ವಿಕಾರಗಳಿಗೆ ಉದಾಹರಣೆಗಳನ್ನು ಕೊಟ್ಟು ಬೇರೆಯಾದ ಪ್ರಬಂಧವೊಂದನ್ನು ಬರೆಯುವ ಉದ್ದೇಶವಿರುವುದರಿಂದ ಇಲ್ಲಿಗೇ ನಿಲ್ಲಿಸುತ್ತೇನೆ.

(12) ಏಕದೇಶಾನ್ವಯ ಎಂಬ ಕಲ್ಪನೆಯನ್ನು ಸಮಾಸತ್ವವನ್ನು ನಿರ್ಧರಿಸಲು ಬಳಸುವ ಒಂದು ಉಪಾಯವಾಗಿ ಮಾತ್ರ ಬಳಸಿದ್ದೇನೆ. ಏಕದೇಶಾನ್ವಯವಿರುವ ಪ್ರಯೋಗಗಳು ಸಾಧುವೋ ಅಸಾಧುವೋ ಎಂಬುದನ್ನು ಕುರಿತು ನನ್ನ ಅಭಿಪ್ರಾಯ ವೇನು ಎಂಬುದನ್ನು ನಾನೆಲ್ಲೂ ತಿಳಿಸಿಲ್ಲ. ಅದು ನನ್ನ ವಿವೇಚನೆಗೆ ಹೊರತಾದದ್ದು. ಏಕದೇಶಾನ್ವಯವಿರುವ ರೂಪಗಳಿಗೆ "ಎರಡು ರೀತಿಯ ಪ್ರತಿಕ್ರಿಯೆಗಳು ಬರಬಹುದು. 'ಪ್ರಯೋಗಶರಣಾಃ ವೈಯಾಕರಣಾಃ' ಎಂದು ಗೊಣಗಿಕೊಂಡು ಈ ರೂಪಗಳನ್ನು ಸಾಧು ಎನ್ನುವುದು ಒಂದು. ದೊಡ್ಡ ದೊಡ್ಡ ಕವಿಗಳೇ ಇಂಥ ರೂಪಗಳನ್ನು ಪ್ರಯೋಗಿಸಿದ್ದರೂ, ಇವುಗಳು ಸಾಧುವಲ್ಲ ಎಂದು ಹೇಳಿ, ಮಹಾಕವಿ ಪ್ರಯೋಗ ಎಂದು ಮನ್ನಿಸಿಬಿಡುವುದು ಎರಡು. ಈ ಮನ್ನಿಸುವಿಕೆಯಿಂದ ಇಂಥ ರೂಪಗಳಿಗೆ ಸಾಧುತ್ವ ಬಂದೊದಗುವುದಿಲ್ಲ ಎಂಬುದನ್ನು ಗಮನಿಸಬೇಕು" (77) ಎಂದಷ್ಟೇ ಹೇಳಿದ್ದೇನೆ. ಇದರಿಂದ ಏಕಾದೇಶಾನ್ವಯವಿರುವ ಪ್ರಯೋಗಗಳಿಗೆ **ಬರಬಹುದಾದ** ಪ್ರತಿಕ್ರಿಯೆಗಳನ್ನು ಕುರಿತು ಬರೆದಿದ್ದೇನೆಯೇ ಹೊರತು, **ಬಂದಿರುವ** ಪ್ರತಿಕ್ರಿಯೆಗಳನ್ನು ಕುರಿತು ನಾನು ಬರೆದಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಹೀಗಿದ್ದರೂ ವಿದ್ವಾನ್ ರಂಗನಾಥ ಶರ್ಮಾ ಅವರು "'ದೇವದತ್ತಸ್ಯ ಗುರುಕುಲಂ' ಮುಂತಾದ ಕಡೆ ಏಕದೇಶಾನ್ವಯವಿದ್ದರೂ ಸಮಾಸ ಬಂದಿರುತ್ತದೆ. ಇಂತಹ ಕಡೆ ಮಹಾಕವಿ ಪ್ರಯೋಗದಿಂದ ಸಾಧುವೆಂದು ಮನ್ನಿಸಿಬಿಡುತ್ತಾರೆಂದೂ ಈ ಮನ್ನಿಸುವಿಕೆಯಿಂದ ಇಂಥ ಸಮಾಸಗಳಿಗೆ ಸಾಧುತ್ವ ಬಂದೊದಗುವುದಿಲ್ಲವೆಂದೂ ಹೇಳಿದ್ದಾರೆ (77). ಇದು ಭ್ರಮೆಯಿಂದಾದ ಹೇಳಿಕೆ. 'ಸಾಪೇಕ್ಷತ್ವೇऽಪಿ ಗಮಕತ್ವಾತ್

ಸಮಾಸಃ' ಎಂದು ವೈಯಾಕರಣರು ಹೇಳುವುದುಂಟು. ಇಂತಹ ಸ್ಥಳದಲ್ಲಿ ಸಮಾಸ ಬರುತ್ತದೆಯೆಂದು ಒಪ್ಪಿಕೊಂಡಿದ್ದಾರೆ. ಆದ್ದರಿಂದ ಇದು ಸಾಧುವೇ. ಮಹಾಕವಿ ಪ್ರಯೋಗದಿಂದ ಇದಕ್ಕೆ ಸಾಧುತ್ವವನ್ನು ಹೇಳಿಲ್ಲ" (30) ಎಂದು ಬರೆದಿದ್ದಾರೆ! "ಕನ್ನಡದ ಮಟ್ಟಿಗೆ ಹೇಳುವುದಾದರೆ, ನಿಸ್ಸಂದೇಹವಾಗಿ ಸಮಾಸಗಳಾಗಿರುವ ರೂಪಗಳು ಬಳಕೆಯಾದಾಗ ಈ ರೀತಿಯ ಏಕದೇಶಾನ್ವಯ ಇಲ್ಲವೇ ಇಲ್ಲ ಎಂದು ನನ್ನ ಭಾವನೆ. ಇದ್ದರೂ ಕ್ವಚಿತ್ತಾಗಿ ಇರಬಹುದು" (77–78) ಎಂದು ನಾನು ಬರೆದಿದ್ದೇನೆ. ಇದಕ್ಕೆ "ಏಕದೇಶಾನ್ವಯುವಿರುವ ಸಮಾಸ ಕನ್ನಡದಲ್ಲಿಲ್ಲ ಎಂದಿರುವುದೂ ಸರಿಯಲ್ಲ. ಈ ಉದಾಹರಣೆಗಳನ್ನು ನೋಡಿ" (30) ಎಂದು ನಾಲ್ಕು ಉದಾಹರಣೆಗಳನ್ನು ಕೊಟ್ಟಿದ್ದಾರೆ. ಒಂದು ಉದಾಹರಣೆಯಲ್ಲಿ **ಹರ್ಷದಾಯಕ ದುಃಖಜನಕ** ಎಂಬ ಸಂಸ್ಕೃತ ಸಮಾಸಗಳಿರುವುದರಿಂದ ಅದರ ಪರಿಶೀಲನೆ ಅನಗತ್ಯ. ಮಿಕ್ಕ ಮೂರು ಉದಾಹರಣೆಗಳನ್ನು ಪರಿಶೀಲಿಸಬಹುದು.

(ಕ) "ಅರಸಿನ ಮನೆ=ಅರಮನೆ. 'ಇದು ಪುಲಿಕೇಶಿಯ ಅರಮನೆ.' ಪುಲಿಕೇಶಿ ಯೆಂಬ ಅರಸಿನ ಮನೆ ಎಂದರ್ಥ. ಇಲ್ಲಿ ಏಕಾದೇಶಾನ್ವಯುವಿಲ್ಲವೇ?" (30) ಎಂಬುದನ್ನು ನೋಡೋಣ. **ಪುಲಿಕೇಶಿಯ ಅರಮನೆ** ಎಂಬುದಕ್ಕೂ **ಪುಲಿಕೇಶಿಯೆಂಬ ಅರಸಿನ ಮನೆ** ಎಂಬುದಕ್ಕೂ ಅರ್ಥದಲ್ಲಿ ವ್ಯತ್ಯಾಸವಿದೆ ಎಂಬುದನ್ನು ಗಮನಿಸಬೇಕು. **ಪುಲಿಕೇಶಿಯ ಅರಮನೆ** ಎಂದರೆ 'ಪುಲಿಕೇಶಿಯೆಂಬವನು ಇರುವ ಅರಮನೆ' ಎಂದರ್ಥ ವಾಗುತ್ತದೆ. **ಅರಮನೆ** ಎಂದಿರುವುದರಿಂದ ಪುಲಿಕೇಶಿಯು ಅರಸನೆಂಬುದು ಸೂಚಿತ ವಾಗುತ್ತದೆ ಅಷ್ಟೆ. **ಪುಲಿಕೇಶಿಯೆಂಬ ಅರಸಿನ ಮನೆ** ಎಂದರೆ 'ಪುಲಿಕೇಶಿ ಎಂಬ ಅರಸನು ಇರುವ ಮನೆ'–ಯಾವ ರೀತಿಯ ಮನೆಯೂ ಆಗಬಹುದು, ಅರಮನೆಯೇ ಆಗಬೇಕೆಂದಿಲ್ಲ. **ಪುಲಿಕೇಶಿಯೆಂಬ ಅರಸಿನ ಅರಮನೆ** ಎಂಬ ಮಾತು ವಿಚಿತ್ರವಾಗಿ ಕಾಣುವುದಿಲ್ಲ ಎಂಬುದನ್ನೂ **ಪುಲಿಕೇಶಿಯೆಂಬ ಅರಸಿನ ಮನೆ** ಎಂಬುದರಲ್ಲಿ **ಅರಸಿನ ಮನೆ** ಎಂಬುದಕ್ಕೆ ಸಮಾಸ ಮಾಡಿದರೆ **ಪುಲಿಕೇಶಿಯೆಂಬ ಅರಮನೆ** ಎಂಬ ವಿಚಿತ್ರವಾದ ರೂಪವು ಬರುತ್ತದೆ ಎಂಬುದನ್ನೂ ಗಮನಿಸಬಹುದು.

(ಚ) "ತಲೆನೋವು, ಕಾಲುಬಳೆ—ಇವು ಸಮಾಸಗಳೆಂದು ಲೇಖಕರೇ ಒಪ್ಪಿ ಕೊಂಡಿದ್ದಾರೆ. ನನ್ನ ತಲೆನೋವು ವಾಸಿಯಾಯಿತು, ಇದು ಆ ಹುಡುಗಿಯ ಕಾಲು ಬಳೆ—ಇಲ್ಲಿ ಏಕದೇಶಾನ್ವಯುವಿಲ್ಲವೇ?...ಇವೆಲ್ಲ ಅಸಾಧು ಪ್ರಯೋಗಗಳೇನು?" (30) ಎಂದು ಕೇಳಿದ್ದಾರೆ. ಇಲ್ಲಿ ಏಕದೇಶಾನ್ವಯುವಿಲ್ಲ ಎಂದೇ ನನ್ನ ಉತ್ತರ, **ತಲೆನೋವು** ಎಂಬುದು **ಜ್ವರ, ನೆಗಡಿ** ಮುಂತಾದ ಶಬ್ದಗಳಂತೆ ಯಾವುದೋ ಒಂದು ರೀತಿಯ ಅಸ್ವಸ್ಥತೆಯನ್ನು ಸೂಚಿಸುವ ಶಬ್ದ. **ತಲೆನೋವು** ಎಂಬುದರಲ್ಲಿ ಆ ಅಸ್ವಸ್ಥತೆ ಯಿರುವುದು ತಲೆಯಲ್ಲಿ ಎಂಬುದು ಸೂಚಿತವಾದರೂ ಅದು ಒಂದು ಅಸ್ವಸ್ಥತೆಯನ್ನು ಸೂಚಿಸುವ ಅಖಂಡವಾದ ಶಬ್ದ. ಆದ್ದರಿಂದ **ನನ್ನ ತಲೆನೋವು ವಾಸಿಯಾಯಿತು** ಎಂಬುದಕ್ಕೆ 'ನನ್ನ ತಲೆಯ (ಅಥವಾ ನನ್ನ ತಲೆಯಲ್ಲಿದ್ದ) ನೋವು ವಾಸಿಯಾಯಿತು'

ಎಂದು ಅರ್ಥವಾಗುವುದಿಲ್ಲ. **ಕಾಲುಬಳೆ** ಎಂಬುದೂ ಹೀಗೆಯೇ. **ಅಂದುಗೆ, ಓಲೆ** ಮುಂತಾದ ಶಬ್ದಗಳು ಆಭರಣಗಳನ್ನು ಸೂಚಿಸುವಂತೆ **ಕಾಲುಬಳೆ** ಎಂಬುದೂ ಒಂದು ಆಭರಣದ ಹೆಸರು. **ಆ ಹುಡುಗಿಯ ಕಾಲುಬಳೆ** ಎಂದರೆ 'ಆ ಹುಡುಗಿಗೆ ಸೇರಿದ ಅಥವಾ ಆ ಹುಡುಗಿಯು ಹಾಕಿಕೊಳ್ಳುವ ಒಂದು ಆಭರಣ ವಿಶೇಷವಷ್ಟೆ. **ಹುಡುಗಿಯ** ಎಂಬುದು **ಕಾಲುಬಳೆ** ಎಂಬುದರಲ್ಲಿರುವ **ಕಾಲು** ಎಂಬುದಕ್ಕೆ ಅನ್ವಯವಾಗುವುದಿಲ್ಲ. **ಕಾಲುಬಳೆ** ಎಂಬ ಇಡಿಯ ರೂಪಕ್ಕೆ ಅನ್ವಯವಾಗುತ್ತದೆ.

(13) "ಗಮಕ ಸಮಾಸವನ್ನೊಪ್ಪದಿದ್ದರೆ 'ಪಾಡುವ, ಆಡಿದ, ಬೀಳಿಯ, ನಿಡಿಯ, ಆ, ಈ, ಆವ" ಮುಂತಾದ ಶಬ್ದಗಳಿಗೆ ಪದತ್ವಸಿದ್ಧಿ ಹೇಗೆ?—ಎಂಬ ಪ್ರಶ್ನೆ ಡಾ॥ ಬಿಳಿಗಿರಿಯವರನ್ನು ಕಾಡಿಸುತ್ತದೆ" (31) ಎಂಬ ಮಾತು. ಈ ಪ್ರಶ್ನೆ ನನ್ನನ್ನು ಕಾಡಿಸುವುದಿಲ್ಲ. ಗಮಕ ಸಮಾಸವು ಸಮಾಸವೇ ಅಲ್ಲದಿದ್ದರೆ ಪ್ರಕೃತ ರೂಪಗಳಿಗೆ ಪದತ್ವ ಸಿದ್ಧಿ ಹೇಗೆ ಎಂಬುದು "ಕೆಲವರು ಎತ್ತಬಹುದಾದ ಒಂದು ಪ್ರಶ್ನೆ" (90) ಎಂದಿದ್ದೇನೆ. "ಇವುಗಳಿಗೆ ಪದತ್ವವಿಲ್ಲದೆ ಹೋದರೆ ಭಾಷಾಶಾಸ್ತ್ರದವರಿಗೆ ಬರುವ ವಿಪತ್ತು ಏನು ಎಂದು ನಮ್ಮ ಪ್ರಶ್ನೆ!" (31) ಎಂಬ ಹಾಸ್ಯೋಕ್ತಿಗೆ ಮುಗುಳುನಗೆಯೇ ಉತ್ತರ. ಈ ಮಾತು ಭಾಷಾಶಾಸ್ತ್ರದವರನ್ನು ಹಂಗಿಸುವ ಮಾತು ಎಂದು ನಾನು ತಿಳಿದುಕೊಳ್ಳುವುದಿಲ್ಲ. ತಿಳಿಹಾಸ್ಯದ ಮಾತು ಎಂದುಕೊಂಡು ಸವಿಯಬಲ್ಲೆ.

(14) "ವರ್ಣನಾತ್ಮಕ ವ್ಯಾಕರಣದ ಪ್ರಕಾರ ಹೇಳುವುದಾದರೆ, ಎಲ್ಲೆಲ್ಲಿ 'ಪದ' ಎಂಬುದಕ್ಕೆ ಸಾಧಾರಣ ಲಕ್ಷಣವನ್ನು ಕೊಡಲು ಸಾಧ್ಯವೋ ಅಲ್ಲೆಲ್ಲಾ ಕೊಟ್ಟು, ಆ ಲಕ್ಷಣಗಳಿಲ್ಲದ ಆದರೆ 'ಪದ'ವೆಂದು ಕರೆದದ್ದರಿಂದ ವ್ಯಾಕರಣಕ್ಕೆ ಲಾಘವವನ್ನು ತಂದು ಕೊಡುವ ರೂಪಗಳನ್ನೂ ಪದಗಳೆಂದು ಕರೆದುಬಿಡುವುದು!" (90) ಎಂದು ನಾನು ಬರೆದಿರುವುದಕ್ಕೆ "ವ್ಯಾಕರಣ ಶಾಸ್ತ್ರವು ಇಷ್ಟು ಹಗುರವಾಗಿದ್ದರೆ ಆನಂದ ವರ್ಧನನು ವೈಯಾಕರಣರನ್ನು 'ಪ್ರಥಮೇ ವಿದ್ವಾಂಸಃ' ಎಂದು ಹೊಗಳುತ್ತಿರಲಿಲ್ಲ" (31) ಎಂದಿದ್ದಾರೆ. ಇಲ್ಲಿ ಹಗುರ–ಭಾರದ ಪ್ರಶ್ನೆಯೇಳುವುದಿಲ್ಲ, ಏಳಬಾರದು. ಯಾರಾದರೂ "ಸಂಸ್ಕೃತದವರಿಗೇನು! ವಿಭಕ್ತಿಪ್ರತ್ಯಯವಿದ್ದರೆ 'ಪದ' ಎಂದುಬಿಡ ಬಹುದು. ವಿಭಕ್ತಿಪ್ರತ್ಯಯವಿಲ್ಲದಿದ್ದರೆ ಅದನ್ನು ಹತ್ತಿಸಿ ಲೋಪಿಸಿ 'ಪದ' ಎಂದು ಬಿಡಬಹುದು. ಹಗುರವಾಗಿಹೋಯಿತು! ಹಾಗೆ ನೋಡಿದರೆ, ಒಂದೊಂದು ಭಾಷೆಗೂ 'ಪದ' ಎಂಬುದರ ಲಕ್ಷಣವನ್ನು ಕಂಡುಹಿಡಿಯಬೇಕಾಗಿರುವ ಭಾಷಾಶಾಸ್ತ್ರ ದವರ ತಲೆಯ ಮೇಲೆ ಎಂಥ ಭಾರವಿದೆ!" ಎಂದು ಹೇಳಿದರೆ ಅದು ಮೂರ್ಖತನ ವಾಗುತ್ತದೆ. "'ವಿಭಕ್ತಿ ಪ್ರತ್ಯಯಾಂತವಾದದ್ದು ಪದ. ಪದವನ್ನು ಮಾತ್ರ ಪ್ರಯೋಗಿಸಬೇಕು. ಕೇವಲ ಪ್ರಕೃತಿಯನ್ನಾಗಲಿ ಕೇವಲ ಪ್ರತ್ಯಯವನ್ನಾಗಲಿ ಪ್ರಯೋಗಿಸಬಾರದು' ಎಂದು ವ್ಯಾಕರಣಶಾಸ್ತ್ರದ ಸಿದ್ಧಾಂತ" [31] ಎಂಬ ಮಾತು

ಸಂಸ್ಕೃತಕ್ಕೆ ಬಹುಮಟ್ಟಿಗೆ ಅನ್ವಯವಾಗುವುದು. ವಿಭಕ್ತಿ ಪ್ರತ್ಯಯಗಳೇ ಇಲ್ಲದ ಭಾಷೆಗಳಲ್ಲಿ ಪದಗಳೇ ಇಲ್ಲವೇನು ?

(15) "ಅವ್ಯಯಗಳು ಲಿಂಗ (ಪ್ರಾತಿಪದಿಕ) ಗಳಾದ್ದರಿಂದ ಅವುಗಳ ಮೇಲೆ ವಿಭಕ್ತಿ ಪ್ರತ್ಯಯವೇಕೆ ಹುಟ್ಟುವುದಿಲ್ಲವೆಂಬುದಕ್ಕೆ ಭಾಷಾಶಾಸ್ತ್ರದವರು ಸರಿಯಾದ ಕಾರಣವನ್ನು ಹೇಳಬೇಕು." (31) ಎಂಬ ಮಾತು. ವರ್ಣನಾತ್ಮಕ ಭಾಷಾವಿಜ್ಞಾನಿಗಳ ಪ್ರಕಾರ ಅವ್ಯಯಗಳು ಲಿಂಗ (ಪ್ರಾತಿಪದಿಕ) ಗಳೇ ಅಲ್ಲ.

(16) "ಸಮಾಸವು ಪದಗಳಿಗೆ ಬರುತ್ತದೆಯೇ ಹೊರತು ಪ್ರಕೃತಿಗಳಿಗಲ್ಲ. ಇದನ್ನೊಪ್ಪಲೇಬೇಕಾಗುತ್ತದೆ. ಇಲ್ಲದಿದ್ದರೆ 'ಮಳೆಗಾಲ' ಎಂಬಲ್ಲಿ 'ಮಳೆ' ಶಬ್ದದಲ್ಲಿ ಸಂಬಂಧಾರ್ಥವೂ 'ಸತ್ಯ ಹೇಳು' ಎಂಬ ಕ್ರಿಯಾಸಮಾಸದಲ್ಲಿ 'ಸತ್ಯ' ಶಬ್ದದಲ್ಲಿ ಕರ್ಮಾರ್ಥವೂ 'ಹಣೆಗಣ್ಣು' ಎಂಬಲ್ಲಿ 'ಹಣೆ' ಶಬ್ದದಲ್ಲಿ ಅಧಿಕರಣಾರ್ಥವೂ ಯಾವುದರಿಂದ ತೋರುತ್ತದೆ ಎಂಬ ಪ್ರಶ್ನೆಗೆ ಉತ್ತರವಿಲ್ಲದೆ ಹೋಗುತ್ತದೆ" (32) ಎಂಬ ಮಾತು. **ಮಳೆಗಾಲ, ಹಣೆಗಣ್ಣು** ಎಂಬ ಸಮಾಸಗಳನ್ನು **ಮಳೆಯ ಕಾಲ, ಹಣೆಯಲ್ಲಿ ಕಣ್ಣು** ಎಂದು ಬಿಡಿಸಿ ತೋರಿಸಿದಾಗ ಈ ಸಮಾಸಗಳನ್ನು ಅರ್ಥಮಾಡಿಕೊಳ್ಳುವುದು ಸುಲಭವಾಗುತ್ತದೆ ಎಂದೇನೋ ಒಪ್ಪಿಕೊಳ್ಳಬಹುದು. ಆದರೆ **ಮಳೆಗಾಲ, ಹಣೆಗಣ್ಣು** ಎಂಬವುಗಳನ್ನು ಸಾಧಿಸಲು **ಮಳೆಯ ಕಾಲ, ಹಣೆಯಲ್ಲಿ ಕಣ್ಣು** ಎಂಬ ರೂಪಗಳಿಂದ ಏಕೆ ಹೊರಡಬೇಕೋ ಸ್ಪಷ್ಟವಾಗುವುದಿಲ್ಲ. **ಮಳೆಯ ಕಾಲ, ಮಳೆಗಾಲ** ಎಂಬವುಗಳು ಎರಡು ಬೇರೆ ಬೇರೆ ರೂಪಗಳು. ಅವೆರಡು ರೂಪಗಳಿಗೂ ಅರ್ಥಸಾಮ್ಯವಿದೆಯೆಂಬ ಮಾತ್ರಕ್ಕೇ ಮೊದಲನೆಯದರಿಂದ ಎರಡನೆಯದು ಸಿದ್ಧವಾಗಿದೆ ಎಂದು ಏಕೆ ಹೇಳಬೇಕು ? **ಮಳೆಯ ಕಾಲ** ಎಂಬುದರಿಂದ **ಮಳೆಗಾಲ** ಎಂಬುದು ಸಿದ್ಧವಾಗಿದೆ ಎಂದು ಹೇಳಿದರೆ ಮಾತ್ರ **ಮಳೆಗಾಲ** ಎಂಬುದರ ಅರ್ಥವನ್ನು ತಿಳಿದುಕೊಳ್ಳಲು ಸಾಧ್ಯವೆನ್ನುವ ಮಾತನ್ನು ಒಪ್ಪುವುದು ನನಗೆ ಕಷ್ಟವಾಗಿ ತೋರುತ್ತದೆ. **ಮಳೆ** ಮತ್ತು **ಕಾಲ** ಇವೆರಡಕ್ಕೂ ಇರುವ ಸಂಬಂಧವನ್ನು ತೋರಿಸುವ ಷಷ್ಠೀ ವಿಭಕ್ತಿಯ ಪ್ರತ್ಯಯವೇ **ಮಳೆಗಾಲ** ಎಂಬುದರಲ್ಲಿ ಕಾಣದಿದ್ದಾಗ, ಅದನ್ನು **ಮಳೆಯ ಕಾಲ** ಎಂಬ ಷಷ್ಠೀವಿಭಕ್ತಿ ಪ್ರತ್ಯಯ ಸ್ಪಷ್ಟವಾಗಿ ಕಾಣುವ ರೂಪದಿಂದ ಸಾಧಿಸಿದ ಮಾತ್ರಕ್ಕೇ **ಮಳೆ** ಮತ್ತು **ಕಾಲ** ಎಂಬವುಗಳಿಗಿರುವ ಸಂಬಂಧ ಹೇಗೆ ಗೊತ್ತಾಗುತ್ತದೆಯೋ ತಿಳಿಯದು. ಪ್ರಕೃತಿಗಳಿಗೇ ಸಮಾಸವಾಗುತ್ತದೆ ಎಂದು ಹೇಳಿ, ಸಮಾಸದಲ್ಲಿ ಅವುಗಳಿಗಿರುವ ಪರಸ್ಪರ ಸಂಬಂಧ ಯಾವ ರೀತಿಯದು ಎಂದು ತಿಳಿಸಿದರೇನು ತಪ್ಪು ? ಉದಾಹರಣೆಗೆ ವಿಟ್ನಿ ಬರೆದ ಸಂಸ್ಕೃತ ವ್ಯಾಕರಣವನ್ನು ನೋಡಬಹುದು. ಸಂಸ್ಕೃತ ವ್ಯಾಕರಣದವರು ಸಮಾಸಗಳನ್ನು ಸಿದ್ಧಗೊಳಿಸಲು ಅನುಸರಿಸುವ ಮಾರ್ಗವೇ ತಪ್ಪು ಎಂದು ನಾನು ಹೇಳುತ್ತಿಲ್ಲ. ಇರುವುದು ಅದೊಂದೇ ಮಾರ್ಗವಲ್ಲ ಎಂದು ಮಾತ್ರ ಹೇಳುವುದು ನನ್ನ ಉದ್ದೇಶ. ನನಗೇನೋ ಎರಡು ಮಾರ್ಗಗಳೂ ಸರಿಯೇ ಎಂದು ತೋರುತ್ತದೆ. ವಿಭಕ್ತಿ ಪ್ರತ್ಯಯಗಳೇ

ಇಲ್ಲದ ಚೀನೀ ಭಾಷೆಯಲ್ಲಿ ಸಮಾಸಗಳು ಬಹುಸಂಖ್ಯೆಯಲ್ಲಿ ಕಾಣಿಸಿಕೊಳ್ಳುತ್ತವೆ. ಇಂಥ ಸನ್ನಿವೇಶಗಳಲ್ಲಿ ಏನು ಮಾಡುವುದು ? ಈ ಎರಡು ಮಾರ್ಗಗಳಲ್ಲಿ ಒಂದೋ ಮತ್ತೊಂದೋ ಸರಿ ಎಂದು ವಾದಿಸುವವರ ಭಿನ್ನಾಭಿಪ್ರಾಯಗಳ ಮೂಲದಲ್ಲಿ ವ್ಯಾಕರಣಕ್ಕೆ ಅಪ್ರಸ್ತುತವಾದ, ಬಹುಶಃ ತಾತ್ತ್ವಿಕವಾದ, ಪ್ರಶ್ನೆಗಳು ಇವೆ ಎಂದು ನನ್ನ ಭಾವನೆ. ಪದಗಳನ್ನೇ (ವಿಭಕ್ತ್ಯಂತ ಶಬ್ದಗಳನ್ನೇ) ಪ್ರಯೋಗಿಸಬೇಕು, ಪ್ರಕೃತಿಪ್ರಯೋಗ ಕೂಡದು ಎಂಬ ಸಿದ್ಧಾಂತಕ್ಕೂ ಪದಗಳು ಕೂಡಿಯೇ ಸಮಾಸಗಳಾಗುತ್ತವೆ ಎಂಬ ಸಿದ್ಧಾಂತಕ್ಕೂ ನಿಕಟವಾದ ಸಂಬಂಧವಿದೆ ಎಂದು ನನಗೆ ತೋರುತ್ತದೆ.

೨

ಈ ಲೇಖನದ ಮೊದಲಿನಲ್ಲೇ ತಿಳಿಸಿದಂತೆ, ಈ ಭಾಗದಲ್ಲಿ ಈ ಚರ್ಚೆಗೆ ಪ್ರಕೃತವಾದ ರೂಪಗಳ ಸಿದ್ಧಿ ವರ್ಣನಾತ್ಮಕ ವ್ಯಾಕರಣದಲ್ಲಿ ಹೇಗಾಗುತ್ತದೆ ಎಂಬುದರ ಸ್ಥೂಲ ಕಲ್ಪನೆಯನ್ನು ಕೊಡುವುದೂ (1). ವರ್ಣನಾತ್ಮಕ ಭಾಷಾವಿಜ್ಞಾನದ ದೃಷ್ಟಿಯಿಂದ 'ಪದ' ಎಂಬುದರ ವಿವೇಚನೆಯನ್ನು ಮಾಡುವುದೂ (2) ನನ್ನ ಉದ್ದೇಶ.

(1) (ಕ) **ನಲಿದ, ನಲಿವ** ಮುಂತಾದ ರೂಪಗಳು ಲಿಂಗ (ಪ್ರಾತಿಪದಿಕ) ಗಳೇ ಅಲ್ಲ; ಧಾತು+ಭೂತ **ದ್** / ಭವಿಷ್ಯತ್ **ವ್**+ವಿಶೇಷಣವೆಂದು ಸೂಚಿಸುವ **ಅ** ಪ್ರತ್ಯಯ ಸೇರಿ ಆದ ರೂಪಗಳು : ಇವುಗಳಿಗೆ ಉಚಿತವಾದ ಪ್ರತ್ಯಯಗಳು ಹತ್ತಿ ಉಂಟಾಗುವ **ನಲಿದನ್, ನಲಿದಳ್, ನಲಿದರ್, ನಲಿದುದು, ನಲಿದುವು, ನಲಿವನ್, ನಲಿವಳ್, ನಲಿವರ್, ನಲಿವುದು, ನಲಿವುವು** ಎಂಬ ರೂಪಗಳು ಲಿಂಗಗಳು : ವಿಭಕ್ತಿ ಪ್ರತ್ಯಯಗಳು ಹತ್ತುವುದು ಈ ರೂಪಗಳಿಗೆ.

(ಚ) **ಅದು, ಇದು** ಎಂಬವುಗಳಿಗೆ ಸಮಾಸದಲ್ಲಿ ಪೂರ್ವಪದಗಳಾಗಿದ್ದಾಗ ಬರುವ ಆದೇಶಗಳ ಫಲವಾಗಿ **ಆ, ಈ** ಎಂಬವುಗಳು ಸಿದ್ಧವಾಗುವುದಿಲ್ಲ. **ಆ, ಈ** ಮುಂತಾದ ರೂಪಗಳಿಗೆ ಉಚಿತವಾದ ಪ್ರತ್ಯಯಗಳು ಹತ್ತುವಾಗ ಕೆಲವೆಡೆಗಳಲ್ಲಿ ಅವುಗಳಿಗೆ **ಅ, ಇ** ಎಂಬ ಆದೇಶಗಳು ಬರುತ್ತವೆ : **ಅದು–ಇದು, ಅವನ್–ಇವನ್, ಅವಳ್–ಇವಳ್, ಅವರ್-ಇವರ್, ಅಂದು–ಇಂದು, ಅಂತು–ಇಂತು** ; ಕೆಲವೆಡೆಗಳಲ್ಲಿ ಮೂಲರೂಪವೇ ಉಳಿದಿರುತ್ತದೆ : **ಆತ–ಈತ, ಆಗಳ್–ಈಗಳ್**. ಇಲ್ಲೇ **ಆವ** ಏ ಎಂಬುದನ್ನೂ ಸೇರಿಸಿಕೊಳ್ಳಬಹುದು : **ಅದು–ಇದು–ಆವುದು, ಅವನ್-ಇವನ್-ಆವನ್, ಅವಳ್-ಇವಳ್-ಆವಳ್, ಅವರ್-ಇವರ್-ಆರ್, ಅಂದು-ಇಂದು-ಎಂದು, ಅಂತು-ಇಂತು-ಎಂತು** ಇತ್ಯಾದಿ. ಶಬ್ದಗಳ ನಡುವೆ ಕಂಡುಬರುವ ಆಂಶಿಕ ರೂಪಸಾಮ್ಯದ ಹಾಗೂ ಆಂಶಿಕ ಅರ್ಥಸಾಮ್ಯದ ಆಧಾರದಮೇಲೆ ನಡೆಯಬೇಕಾಗಿರುವ ವಿಶ್ಲೇಷಣೆಯಿದು.

(ಟ) ಗುಣವಾಚಕಗಳು ಅನೇಕ ಸಮಸ್ಯೆಗಳನ್ನೊಡ್ಡುತ್ತವೆ. ವಿವರಗಳಿಗೆ ಹೋಗದೆ ಹೇಳುವುದಾದರೆ **ಬಿಳಿ (ಬೆಳ್), ಕರಿ (ಕರ್/ಕಾರ್) ನಿಡಿ (ನಿಟ್ಟ್)** ಮುಂತಾದ ಮೂಲಪ್ರಕೃತಿಗಳಿಗೆ ಉಚಿತವಾದ ಪ್ರತ್ಯಯಗಳು ಹತ್ತಿ **ಬಿಳಿಯು, ಕರಿಯು, ನಿಡಿಯು, ಬಿಳಿದು, ಕರಿದು, ನಿಡಿದು** ಮುಂತಾದುವುಗಳು ಸಿದ್ಧವಾಗುತ್ತವೆ ಎಂದು ಸದ್ಯಕ್ಕೆ ಸ್ಥೂಲವಾಗಿ ಹೇಳಬಹುದು.

(ತ) ಪದರಚನೆಯ ದೃಷ್ಟಿಯಿಂದ ಕನ್ನಡದ ಮೂಲಪ್ರಕೃತಿಗಳನ್ನು ಮೂರು ವರ್ಗಗಳಲ್ಲಿ ಹಂಚಬಹುದು : ನಾಮ, ಕ್ರಿಯಾ, ಇತರ. 'ಅವ್ಯಯ' ಎಂಬ ಶಬ್ದವನ್ನು ಉದ್ದೇಶಪೂರ್ವಕವಾಗಿಯೇ ಬಳಸಿಲ್ಲ. ಈ ವರ್ಗೀಕರಣಕ್ಕೆ ರೌಪಿಕವಾದ ಆಧಾರವುಂಟು. **ಮರ, ಗಿಡ, ಕಲ್, ಕಣ್, ತಂದೆ** ಮುಂತಾದವುಗಳು ಮೊದಲನೆಯ ವರ್ಗದಲ್ಲಿಯೂ, **ನಲಿ, ಮಾಡು, ನೋಡು** ಮುಂತಾದುವುಗಳು ಎರಡನೆಯ ವರ್ಗದಲ್ಲಿಯೂ ಸೇರುತ್ತವೆ. ಮೂರನೆಯ ವರ್ಗದಲ್ಲಿ ಅನೇಕ ಉಪವರ್ಗಗಳುಂಟು. ವಿವರಗಳಿಗೆ ಹೋಗದೆ ಹೇಳುವುದಾದರೆ, ಮೇಲೆ (ಚ)ದಲ್ಲಿ ಹೇಳಿದ **ಆ, ಈ, ಆವ**/ಏ ಎಂಬವುಗಳೂ, (ಟ)ದಲ್ಲಿ ಹೇಳಿದ **ಬಿಳಿ, ಕರಿ, ನಿಡಿ** ಮುಂತಾದುವುಗಳೂ, ನಮ್ಮ ಪ್ರಾಚೀನ ವ್ಯಾಕರಣಗಳಲ್ಲಿ ಅವ್ಯಯ ನಿಪಾತಗಳೆಂದು ಕರೆಯುವ ರೂಪಗಳಲ್ಲಿ ಅವಿಭಾಜ್ಯವಾದವುಗಳೂ ಮೂರನೆಯ ವರ್ಗದಲ್ಲಿ ಸೇರುತ್ತವೆ ಎಂದು ಸದ್ಯಕ್ಕೆ ಹೇಳಬಹುದು.

(ಪ) ಈ ಮೂಲಪ್ರಕೃತಿಗಳಿಗೆ ಪ್ರತ್ಯಯಗಳು ಹತ್ತಿ ಸಾಧಿತ ಪ್ರಕೃತಿಗಳು ಸಿದ್ಧವಾಗುತ್ತವೆ. ಯಾವುದೋ ಒಂದು ವರ್ಗಕ್ಕೆ ಸೇರಿದ ಮೂಲಪ್ರಕೃತಿಯಿಂದ ಸಾಧಿತವಾದ ಪ್ರಕೃತಿ ಅದೇ ವರ್ಗಕ್ಕೆ ಸೇರಿರಬೇಕೆಂಬ ನಿಯಮವೇನೂ ಇಲ್ಲ. ಉದಾಹರಣೆಗೆ **ನಂಬು** ಎಂಬುದಕ್ಕೆ **ಇಸು** ಸೇರಿ **ನಂಬಿಸು** ಎಂಬ ಕ್ರಿಯಾಪ್ರಕೃತಿಯೂ, **ಇಕೆ** ಸೇರಿ **ನಂಬಿಕೆ** ಎಂಬ ನಾಮಪ್ರಕೃತಿಯೂ, (ಕ)ದಲ್ಲಿ ಹೇಳಿದ ಪ್ರತ್ಯಯಗಳು ಸೇರಿ **ನಂಬಿದ, ನಂಬುವ** ಎಂಬ 'ಇತರ' ಪ್ರಕೃತಿಗಳೂ ಸಿದ್ಧವಾಗುತ್ತವೆ. ಈ **ನಂಬಿದ, ನಂಬುವ** ಎಂಬವುಗಳಿಗೇ ಮತ್ತೆ ಪ್ರತ್ಯಯಗಳು ಹತ್ತಿ **ನಂಬಿದನ್, ನಂಬುವನ್** ಮುಂತಾದ ನಾಮಪ್ರಕೃತಿಗಳು ಸಿದ್ಧವಾಗುತ್ತವೆ. ಹಾಗೆಯೇ 'ಇತರ' ವರ್ಗಕ್ಕೆ ಸೇರಿದ **ಆ, ಈ** ಎಂಬವುಗಳಿಗೆ ಪ್ರತ್ಯಯಗಳು ಸೇರಿ ಮೊದಲನೇ ವರ್ಗಕ್ಕೆ ಸೇರಿದ **ಅದು, ಇದು** ಮುಂತಾದುವುಗಳೂ, 'ಇತರ' ವರ್ಗಕ್ಕೇ ಸೇರಿದ **ಅಂತು-ಇಂತು** ಮುಂತಾದುವುಗಳೂ ಸಿದ್ಧವಾಗುತ್ತವೆ.

(2) ಎಲ್ಲಾ ಭಾಷೆಗಳಿಗೂ ಅನ್ವಯವಾಗುವಂತೆ 'ಪದ' ಎಂಬುದರ ಲಕ್ಷಣವನ್ನು ಯಾರೂ ಇದುವರೆಗೆ ಹೇಳಿಲ್ಲ. ಮುಂದೆಯೂ ಹೇಳುವ ಸಂಭವ ಕಡಮೆಯೇ. ಭಾಷೆಭಾಷೆಗೂ ಅದರ ಲಕ್ಷಣ ವ್ಯತ್ಯಾಸವಾಗುತ್ತಾ ನಡೆಯುತ್ತದೆ. ನಮ್ಮ ಹಿಂದಿನ ವ್ಯಾಕರಣಕಾರರು ವಿಭಕ್ತ್ಯಂತವಾದ ಶಬ್ದಗಳನ್ನು ಮಾತ್ರ ಪದಗಳೆಂದು

ಕರೆದರು. ಅವರು ಈ ಲಕ್ಷಣವನ್ನು ತಾವು ವರ್ಣಿಸುತ್ತಿದ್ದ ಭಾಷೆಯ ದೃಷ್ಟಿಯಿಂದ ಹೇಳಿರಬಹುದಾದ್ದರಿಂದ, ವಿಶ್ವವ್ಯಾಪಕವಾದ ಲಕ್ಷಣವನ್ನು ಕೊಟ್ಟಿದ್ದಾರೆಂದು ಹೇಳುವಂತಿಲ್ಲ. ಆದುದರಿಂದ ಅವರು ಕೊಟ್ಟ ಲಕ್ಷಣವು ಇತರ ಭಾಷೆಗಳಿಗೆ ಅನ್ವಯವಾಗುವುದಿಲ್ಲವೆಂದು ಅವರನ್ನು ಟೀಕಿಸುವಂತಿಲ್ಲ. ಆದರೆ ಅವರು ಹೇಳಿದ ಲಕ್ಷಣ ಅವರು ವರ್ಣಿಸುತ್ತಿದ್ದ ಭಾಷೆಗೇ ಅನ್ವಯವಾಗುತ್ತದೆಯೋ ಎಂಬುದನ್ನು ಪರೀಕ್ಷಿಸಬಹುದು.

ವಿಭಕ್ತ್ಯಂತವಾದ ಶಬ್ದಗಳೇ ಪದಗಳು ಎಂಬ ಮಾತಿನ ಪ್ರಕಾರ **ಮರವನ್ನು, ಮರದಿಂದ, ಮರಕ್ಕೆ, ಬಿದ್ದನು, ಹೇಳಿದೆನು** ಮುಂತಾದ ಸಾವಿರಾರು ರೂಪಗಳು ಪದಗಳಾಗುತ್ತವೆ. ಇದು ಸರಿಯೇ. ಅವ್ಯಯಗಳನ್ನು ಪದಗಳೆಂದು ಕರೆಯಬೇಕೆನಿಸಿದುದರಿಂದಲೋ ಏನೋ, ಅವುಗಳಿಗೂ ವಿಭಕ್ತಿಪ್ರತ್ಯಯವನ್ನು ಹತ್ತಿಸಿ ಲೋಪಿಸಿದರು. ಒಂದೇ ಒಂದು ಲಕ್ಷಣದಿಂದ ಎಲ್ಲಾ ಪದಗಳನ್ನೂ ವರ್ಣಿಸಿದ ಒಂದು ರೀತಿಯ ತೃಪ್ತಿ ಇದರಿಂದ ದೊರಕಿದ್ದೇನೋ ನಿಜವಾದರೂ, ವರ್ಣನೆಯಲ್ಲಿ ಅಸಹಜತೆ ಅಥವಾ ಕೃತಕತೆ ತಲೆದೋರಿತು. ಅದರ ಬದಲು, ಹೇಗಿದ್ದರೂ ಪಟ್ಟಿ ಹಾಕಲೇಬೇಕಾಗಿದ್ದ ಅವ್ಯಯಗಳನ್ನು ಪಟ್ಟಿ ಹಾಕಿ, ಅವುಗಳೂ ಪದಗಳು ಎಂದು ಬಿಟ್ಟಿದ್ದರೆ ವರ್ಣನೆ ವಾಸ್ತವಿಕವೂ ಸಹಜವೂ ಆಗಿರುತ್ತಿತ್ತು. ವಿಭಕ್ತಿಪ್ರತ್ಯಯಗಳನ್ನು ಹತ್ತಿಸಿ ಲೋಪಿಸಬೇಕಾದ್ದರಿಂದ ಅವ್ಯಯಗಳನ್ನೂ ಲಿಂಗ (ಪ್ರಾತಿಪದಿಕ) ಗಳೆಂದು ಕರೆಯಬೇಕಾಯಿತು. ಈ ವಿಭಕ್ತಿಪ್ರತ್ಯಯ ಹತ್ತಿ ಲೋಪವಾಗುವುದನ್ನು ಬಿಟ್ಟರೆ, ಅವ್ಯಯಗಳನ್ನು ಲಿಂಗ ಎಂದು ಹೇಗೆ ಕರೆಯಬಹುದು? ಲಿಂಗಗಳೆಂದು ಕರೆಯುವ ಇತರ ಶಬ್ದಗಳಿಗೂ ಅವ್ಯಯಗಳಿಗೂ ಸಾಮಾನ್ಯವಾಗಿರುವ ಒಂದೇ ವರ್ಗಲಕ್ಷಣವಿರಬೇಕಲ್ಲ? ಅದು ಯಾವುದು? ಇದಕ್ಕೆ ತೃಪ್ತಿಕರವಾದ ಉತ್ತರ ಇದೆಯೋ ಇಲ್ಲವೋ ನನಗೆ ತಿಳಿಯದು.

ಆದುದರಿಂದ ಕನ್ನಡದಲ್ಲಿ ವಿಭಕ್ತ್ಯಂತ ಶಬ್ದಗಳು ಹಾಗೂ ಅವ್ಯಯಗಳು ಪದಗಳೆಂದು ಕರೆಸಿಕೊಳ್ಳುತ್ತವೆ. ಅಲ್ಲದೆ, **ಮಾಡುತ, ಮಾಡಿದೊಡೆ, ಮಾಡಲ್, ಮಾಡಿ, ಮಾಡಿದ, ಬಳಿಯ, ಕರಿಯ** ಮುಂತಾದ ರೂಪಗಳ ಕಡೆಯಲ್ಲಿರುವ ಪ್ರತ್ಯಯಗಳನ್ನೂ ವಿಭಕ್ತಿ ಪ್ರತ್ಯಯಗಳೆಂದು ಕರೆದರೆ, ಆ ಶಬ್ದಗಳೂ ಪದಗಳಾಗುತ್ತವೆ. ಇದು ಇಷ್ಟವಿಲ್ಲದಿದ್ದರೆ ಪ್ರಕೃತ ಪ್ರತ್ಯಯಗಳಿಂದ ಕೊನೆಯಾಗುವ ಶಬ್ದಗಳನ್ನೂ ಪದಗಳೆಂದು ಕರೆಯಬಹುದು. ಹೀಗೆ ಕನ್ನಡದಲ್ಲೇನೋ, ಅವ್ಯಯಗಳನ್ನು ಬಿಟ್ಟರೆ, ಶಬ್ದಾಂತ್ಯದಲ್ಲಿರುವ ಪ್ರತ್ಯಯಗಳ ಆಧಾರದ ಮೇಲೆ 'ಪದ' ಎಂಬುದರ ಲಕ್ಷಣವನ್ನು ಹೇಳಬಹುದು. ಆದರೂ ಪ್ರಕೃತಿಯೇ ಪದವಾಗಿಯೂ ಬರುತ್ತದೆ ಎಂಬುದನ್ನು ತಪ್ಪಿಸುವಂತಿಲ್ಲ. **ಮಾಡು, ನೋಡು** ಮುಂತಾದ ವಿಧ್ಯರ್ಥದ ಏಕವಚನ ರೂಪಗಳನ್ನು ನೋಡಬಹುದು. ಬಹುಮಟ್ಟಿಗೆ ಪ್ರಕೃತಿಗಳೇ ಪದವಾಗಿ ಕಾಣಿಸಿಕೊಳ್ಳುವ ಭಾಷೆಗಳೂ ಇಲ್ಲದಿಲ್ಲ. ಆದ್ದರಿಂದ ಯಾವುದೋ ಒಂದು ಭಾಷೆಯ ಪದಗಳಲ್ಲಿ

ಬಹುಪಾಲು ವಿಭಕ್ತ್ಯಂತವಾದ್ದರಿಂದ, 'ಪ್ರಕೃತಿ ಪ್ರಯೋಗವೇ ಸಲ್ಲದು' ಎಂದು ಸಿದ್ಧಾಂತ ಮಾಡುವುದು ದುಸ್ಸಾಹಸದ ಮಾತಾಗುತ್ತದೆ.

ಈ ಸಂದರ್ಭದಲ್ಲಿ ಬ್ಲೂಮ್‌ಫೀಲ್ಡ್ ಎಂಬಾತನು 'ಪದ' ಎಂಬುದಕ್ಕೆ ಕೊಟ್ಟಿರುವ ಲಕ್ಷಣವನ್ನು ಪರೀಕ್ಷಿಸಬೇಕು. ಏಕೆಂದರೆ 'ಪದ' ಎಂಬುದಕ್ಕೆ ಸೂಚಿಸಲಾಗಿರುವ ಲಕ್ಷಣಗಳಲ್ಲೆಲ್ಲಾ ಅದು ಹೆಚ್ಚು ಉಪಾದೇಯವಾಗಿದೆ. ಅವನ ಪ್ರಕಾರ ಪದ (word) ಎಂಬುದು minimal free form. ಸಂದರ್ಭವಶದಿಂದಾಗಲಿ, ಸ್ವಶಕ್ತಿಯಿಂದಾಗಲಿ ತಾನೇ ವಾಕ್ಯವಾಗಿ ನಿಲ್ಲಬಲ್ಲ ರೂಪಕ್ಕೆ ಸ್ವತಂತ್ರ ರೂಪವೆಂದು ಹೆಸರು. **ಮರ, ಬಿದ್ದನು, ಬೇಗ, ಬಹಳ, ಅಲ್ಲಿಗೆ, ಮನೆಯಿಂದ, ನಾಲ್ಕು ಜನ, ನೆನ್ನೆ ನಾನು ತುಮಕೂರಿಗೆ ಹೋಗಿದ್ದೆ** ಮುಂತಾದ ರೂಪಗಳೆಲ್ಲಾ ವಾಕ್ಯಗಳಾಗಿ ಗೋಚರಿಸಬಲ್ಲುವು. ಇಂಥ ರೂಪಗಳೆಲ್ಲಾ ಸ್ವತಂತ್ರರೂಪಗಳು. **ನಾಲ್ಕು ಜನ, ನೆನ್ನೆ ನಾನು ಮೈಸೂರಿಗೆ ಹೋಗಿದ್ದೆ** ಎಂಬವುಗಳನ್ನು ಸ್ವತಂತ್ರರೂಪಗಳನ್ನಾಗಿ ವಿಭಾಗಿಸಬಹುದು. ಆದುದರಿಂದ ಅವುಗಳು ಅವಿಭಾಜ್ಯ ಸ್ವತಂತ್ರರೂಪಗಳಲ್ಲ. **ಮರ, ಬೇಗ, ಬಹಳ** ಮುಂತಾದುವುಗಳನ್ನು ವಿಭಾಗಿಸಲೂ ಆಗುವುದಿಲ್ಲ. **ಮನೆಯಿಂದ, ಅಲ್ಲಿಗೆ** ಎಂಬವುಗಳನ್ನು ವಿಭಾಗಿಸಲು ಶಕ್ಯವಿದ್ದರೂ ಅವುಗಳ ವಿಭಜನೆಯಿಂದ ಬರುವ ರೂಪಗಳೆಲ್ಲಾ ಸ್ವತಂತ್ರವಾದವುಗಳಲ್ಲ. **ಮರ, ಬೇಗ, ಬಹಳ, ಮನೆಯಿಂದ, ಅಲ್ಲಿಗೆ** – ಇಂಥ ಅವಿಭಾಜ್ಯ ಸ್ವತಂತ್ರ ರೂಪಗಳಿಗೆ 'ಪದಗಳು' ಎಂದು ಹೆಸರು.

ಈ ಲಕ್ಷಣವನ್ನು ಯಾವ ಭಾಷೆಗೆ ಬೇಕಾದರೂ ಅನ್ವಯಿಸಬಹುದು. 'ಪದ'ಗಳೆಂದು ಕರೆಯಬಹುದಾದ ಶಬ್ದಗಳು ದೊರೆಯುತ್ತವೆ ಎಂಬುದೇನೋ ದಿಟವೇ. ಆದರೆ ಪದಗಳೆಂದು ಕರೆಯಬೇಕು ಎನಿಸಿದ ಅನೇಕ ಶಬ್ದಗಳನ್ನು ಪದಗಳೆಂದು ಕರೆಯುವಂತಿಲ್ಲ. ಕನ್ನಡದಲ್ಲಿ **ಬಂದ, ಮಾಡಿದ, ಮಾಡುತೆ, ಮಾಡಲ್, ಬಿಳಿಯ, ಕರಿಯ** ಮುಂತಾದುವುಗಳಿಗೆ ಇದು ಅನ್ವಯವಾಗುವುದಿಲ್ಲ. ಇಂಗ್ಲಿಷಿನಲ್ಲೂ ಸಾಧಾರಣವಾಗಿ ಎಲ್ಲರೂ ಪದಗಳೆಂದು ಕರೆಯುವ **the** ಮತ್ತು **a** ಮುಂತಾದುವುಗಳಿಗೆ ಈ ಲಕ್ಷಣವು ಅನ್ವಯಿಸುವುದಿಲ್ಲ.

ಪರಿಚಿತವಲ್ಲದ ಭಾಷೆಯೊಂದನ್ನು ವಿಶ್ಲೇಷಿಸುವಾಗ ಬ್ಲೂಮ್‌ಫೀಲ್ಡ್‌ನ ಈ ಲಕ್ಷಣದಿಂದ ಆಗುವ ಸಹಾಯವು ಮಹತ್ತಾದುದೇ. ವಿಶ್ಲೇಷಣೆಯ ಮೊದಲ ಘಟ್ಟದಲ್ಲಿ ಭದ್ರವಾದ ಆಧಾರವೊಂದನ್ನು ಈ ಲಕ್ಷಣ ನೀಡಬಲ್ಲುದು. ಆದರೆ ವಿಶ್ಲೇಷಣೆ ಮುಂದುವರಿದಂತೆ, ಪ್ರಕೃತ ಭಾಷೆಯ ರಚನೆ ಹೆಚ್ಚು ಹೆಚ್ಚು ಬೆಳಕಿಗೆ ಬಂದಂತೆ, 'ಪದ' ಎಂಬುದರ ವ್ಯಾಪ್ತಿಯನ್ನು ವಿಸ್ತರಿಸುತ್ತಾ ಹೋಗಬಹುದು.

ಎಷ್ಟೋ ವೇಳೆ. ಶಬ್ದಗಳ ಅರ್ಥದ ದೃಷ್ಟಿಯಿಂದ ಬೆಲೆಯಿಲ್ಲವೆಂದು ನಿರ್ಧರಿಸಲಾದ ಧ್ವನಿವಿಶೇಷಗಳು ಯಾವ ಶಬ್ದ ಪದ, ಯಾವುದಲ್ಲ ಎಂಬುದನ್ನು ನಿರ್ಧರಿಸಲು

ಸಹಾಯ ಮಾಡಬಹುದು. ಕನ್ನಡದಲ್ಲಿ ಸಾಧಾರಣ ಲಕ್ಷಣಗಳಿಂದ ಸಿದ್ಧವಾದ ಪದಗಳ ಆದಿಯಲ್ಲಿ ಆಘಾತ ಬೀಳುತ್ತದೆ. ಈ ಅಂಶವನ್ನು ಯಾವ ಶಬ್ದ ಪದ ಎಂದು ನಿರ್ಧರಿಸಲು ಉಪಯೋಗಿಸಬಹುದು. ಉದಾಹರಣೆಗೆ **ಆ ಮನೆ, ಯಾವ ಹುಡುಗ** ಎಂಬ ರೂಪಗಳಲ್ಲಿ **ಆ, ಮ, ಯಾ, ಹು** ಎಂಬ ಅಕ್ಷರಗಳ ಮೇಲೆ ಆಘಾತ ಬೀಳುತ್ತದೆ. **ಆ** ಮತ್ತು **ಯಾ** ಎಂಬವುಗಳ ಮೇಲೆ ಬೀಳುವ ಆಘಾತಗಳು **ಆ** ಮತ್ತು **ಯಾವ** ಎಂಬವುಗಳನ್ನು ಪದಗಳೆಂದು ಕರೆಯಲು ಸಹಾಯ ಮಾಡುತ್ತವೆ. ಎರಡು ಆಘಾತಗಳ ನಡುವಣ ಅಥವಾ ಆಘಾತಕ್ಕೂ ಮೌನಕ್ಕೂ ನಡುವಣ ವರ್ಣ ಸಮುದಾಯವನ್ನು ಪದ ಎಂದು ಕರೆಯಬಹುದು. **ಮಾಡಿದ, ಮಾಡುವ, ಬಿಳಿಯ** ಮುಂತಾದ ರೂಪಗಳು ಪದಗಳೆಂದು ಈ ಮಾರ್ಗದಿಂದಲೂ ಗೊತ್ತಾಗುತ್ತದೆ.

ಹೀಗೆ ಅವಿಭಾಜ್ಯ ಸ್ವತಂತ್ರರೂಪಗಳು, ಶಬ್ದದಲ್ಲಿರುವ ಪ್ರತ್ಯಯಗಳು, ಧ್ವನಿವಿಶೇಷಗಳು, ಪದಗಳೆಂದು ಕರೆದದ್ದರಿಂದ ವ್ಯಾಕರಣಕ್ಕೆ ಲಾಘವ ಕೊಡುವ ಶಬ್ದಗಳು–ಒಂದು ಭಾಷೆಯ ಪದಗಳನ್ನು ಕಂಡುಹಿಡಿಯಲು ಸಹಾಯಮಾಡುತ್ತವೆ.

---

## ಮಾನವ ಸಂಸಾರದ ದುಃಖ

ನೆನೆಯದೆ ಕಾಣದೆ ಕೇಳದೆ
ತನುವಿನ ಪೊಲ್ಲಮೆಯನಱಿದುಮಱಿಯದೆ ತೊಱೆಯಲ್
ಮನಮುಳ್ಳೊಡೆ ಜೀವಕ್ಕೀ
ತನುವಿರೆ ವೈರಾಗ್ಯಕಾರಣಂ ಪೆಱತುಂಟೇ ?

ತನಗಲ್ಲದೊಡಲ್ಗೊಡವೇಗೆ
ಮನಮಿಟ್ಟಪವರ್ಗ ಮಾರ್ಗಮಂ ಪೊರ್ದದೆ ತ
ನ್ನನೆ ತಾನೆ ನಂಬಿಸುವೊಡಾ
ತ್ಮಸಂತು ಪೇೞಾತ್ಮವಂಚಕರ್ ಪೆಱರೊಳರೇ ?

—ರನ್ನ

# ಈಚೆಗೆ ಶೋಧಿಸಿದ ಜೈನಧರ್ಮದ ಹೆಚ್ಚಿನ ಕುರುಹುಗಳು

—ಡಾ॥ ಎಂ. ಚಿದಾನಂದಮೂರ್ತಿ

ನನ್ನ ಈಚಿನ ಕಾಲ್ನಡಗೆಯ ಪ್ರವಾಸದಲ್ಲಿ ಹಲವು ಕಡೆ ಜೈನಧರ್ಮದ ಕುರುಹುಗಳನ್ನು ಕಾಣಲು ಸಾಧ್ಯವಾಯಿತು. ಅವುಗಳಲ್ಲಿ ಬಹುಪಾಲನ್ನು ವಿದ್ವಾಂಸರು ಗಮನಿಸಿರುವರಾದರೂ ಅವರ ಗಮನಕ್ಕೆ ಬಾರದಿರುವ ಕೆಲವನ್ನು ಇಲ್ಲಿ ಪರಿಚಯಮಾಡಿಕೊಟ್ಟು ಕರ್ನಾಟಕದಲ್ಲಿನ ಜೈನಧರ್ಮದ ಅಧ್ಯಯನಕ್ಕೆ ಹೆಚ್ಚಿನ ಸಾಮಗ್ರಿಯನ್ನು ಒದಗಿಸುವುದು ಈ ಲೇಖನದ ಉದ್ದೇಶವಾಗಿದೆ.

(1) ತುಮಕೂರು ಜಿಲ್ಲೆಯ ನಿಟ್ಟೂರು, ವಿಟ್ಲ (ಹಟ್ಲ) ಗ್ರಾಮಗಳ ಬಸದಿಗಳ ವಿಷಯ ಎಲ್ಲರಿಗೂ ತಿಳಿದಿದೆ. ಕಿಬ್ಬನಹಳ್ಳಿ ಕ್ರಾಸ್ ಸಮೀಪದ ಹಾಲುಗೊಣದಿಂದ ತಿಪಟೂರು ರಸ್ತೆಗೆ ಹೋಗಲು ಒಳದಾರಿಯಿದೆ. ದಾರಿಯಲ್ಲಿ ಬಹು ಸುಂದರವಾದ, ವಿಜಯನಗರ ಕಾಲದ ಮಲ್ಲಿಕಾರ್ಜುನ ದೇವಾಲಯವಿದೆ. ಅಲ್ಲಿಂದ ಮುಂದೆ ಹೋದರೆ ತಿಮ್ಮಲಾಪುರ ಎಂಬ ಹಳ್ಳಿಯ ಊರಿನ ಹೊರಗೆ ಹೊಂಡವ ದಡದ ಬೇವಿನ ಕಟ್ಟೆಯ ಮೇಲೆ ಮೂರು ಶಿಲ್ಪದ ಕಲ್ಲುಗಳಿವೆ. ಒಂದು ಕಲ್ಲಿನ ಮೇಲೆ ಸಿಂಹಲಲಾಟ, ಇನ್ನೊಂದರ ಮೇಲೆ ಪದ್ಮವನ್ನು ಹೊಯ್ಸಳ ಶೈಲಿಯಲ್ಲಿ ಕೆತ್ತಲಾಗಿದೆ. ಸಿಂಹಲಲಾಟವಿರುವ ಕಲ್ಲಿನ ಎಡ ಅಂಚಿನಲ್ಲಿ ಜಿನಮೂರ್ತಿಯಿದೆ. ಆ ಮೂರೂ ಕಲ್ಲುಗಳು ಯಾವುದೋ ಭಗ್ನ ಬಸದಿಯ ಅವಶೇಷಗಳೆಂಬಲ್ಲಿ ಅನುಮಾನವಿಲ್ಲ. ಅಲ್ಲೇ ಪಕ್ಕದಲ್ಲಿರುವ ಜಕ್ಕನಹಳ್ಳಿ (<ಯಕ್ಷ?) ಎಂಬ ಹೆಸರೂ ಅರ್ಥಪೂರ್ಣವಾಗಿದೆ. ಆ ಸುತ್ತಮುತ್ತಣ ಪ್ರದೇಶವನ್ನು ಶೋಧಿಸಿದರೆ ಇನ್ನೂ ಹೆಚ್ಚಿನ ಕುರುಹುಗಳು ದೊರಕುವ ಸಾಧ್ಯತೆ ಇದೆ.

(2) ದಾವಣಗೆರೆಗೆ ಸಮೀಪದ ಶಾಮನೂರು (ಹಿಂದೆ 'ಸೆಂಬನೂರ್') ಒಂದು ಜೈನ ಕೇಂದ್ರವಾಗಿದ್ದಿತೆಂದು ಅಲ್ಲಿಯ ಶಾಸನವೊಂದು ಹೇಳುತ್ತದೆ. ಈಗ ಆ ಊರಲ್ಲಿ ಜೈನರು ಯಾರೂ ಇಲ್ಲ. ಅಲ್ಲಿಯ 'ಕೋಟೆ' ಭಾಗದಲ್ಲಿದ್ದ ಒಂದು ಬಸದಿ ಈಗ ಪೂರ್ತಿ ಹಾಳಾಗಿ ಅದರ ಕಂಬಗಳೆಲ್ಲ ಅಸ್ತವ್ಯಸ್ತವಾಗಿ ಬಿದ್ದಿವೆ. ಅದರ ಗರ್ಭಗುಡಿ ಮಾತ್ರ ಉಳಿದಿದ್ದು ಅದರಲ್ಲಿ ಮಹಾವೀರ ತೀರ್ಥಂಕರನ ದೊಡ್ಡ ವಿಗ್ರಹವಿದೆ. ದಾವಣಗೆರೆಯ ಜೈನರು ಆಗಾಗ ಬಂದು ಆ ವಿಗ್ರಹವನ್ನು ಪೂಜೆ ಮಾಡಿಕೊಂಡು ಹೋಗುತ್ತಿದ್ದಾರೆ ಮತ್ತು ಆ ವಿಗ್ರಹವಿರುವ ಸಂಗತಿ ಆ ಪ್ರದೇಶದ ಜನಕ್ಕೆಲ್ಲ ಗೊತ್ತಿದೆ. ಅದನ್ನು ಊರ ಜನ "ಬಸಲಿ ದೇವರು" ಎಂದು ಕರೆಯುವರಲ್ಲದೆ ಅದು ಹೆಣ್ಣುದೇವರೆಂದು ಭಾವಿಸುತ್ತಾರೆ. ಊರಲ್ಲಿ ಹೆಚ್ಚಾಗಿರುವ ವೀರಶೈವರು

ಅವಕ್ಕೆ ವಿಭೂತಿ ಕುಂಕುಮಗಳನ್ನು ಧರಿಸಿ ತಮ್ಮ ದೇವರೆಂದೇ ಭಾವಿಸಿದ್ದಾರೆ. ಬಸದಿ ಹತ್ತಿರ ಹೊರ ಊರಿನ ಮಕ್ಕಳು ಬಂದರೆ ಕೆಮ್ಮು, ನೆಗಡಿ, ತುರಿ, ಜ್ವರ ಅವರನ್ನು ಬಾಧಿಸುತ್ತವೆಯೆಂದೂ ಬಸಲಿದೇವರಿಗೆ ಬಾಳೆಹಣ್ಣು ನೈವೇದ್ಯ ಮಾಡಿದರೆ ಅವು ನಿವಾರಣೆಯಾಗುತ್ತವೆಂದೂ ಜನರ ನಂಬಿಕೆ. ಶಿವರಾತ್ರಿ ದಿನ ವಿಶೇಷ ಪೂಜೆ, ಪುರಾಣವಾಚನ ಉಂಟು. ಕಾರ್ತಿಕದ ದಿನಗಳಂದು ಶಿವದೇವಾಲಯಗಳಂತೆಯೇ ಇಲ್ಲೂ ದೀಪ ಉರಿಸಿ ಪೂಜೆ ನೆರವೇರಿಸುತ್ತಾರೆ. ಊರಿನ ಜೈನರು ವೀರಶೈವರಾಗಿ ಪರಿವರ್ತನೆ ಹೊಂದಿದಮೇಲೂ ತಮ್ಮ ಬದಲಾದ ಪರಿಸರಕ್ಕೆ ತಮ್ಮ ಹಿಂದಿನ ನಂಬಿಕೆಯ ದೇವರನ್ನು ಮಾರ್ಪಡಿಸಿಕೊಂಡಿರುವ ವಿಧಾನವು ಜಾನಪದ ಶಾಸ್ತ್ರಜ್ಞರಿಗೆ ಆಸಕ್ತಿಯ ವಿಷಯವಾದೀತು. ಜನರ ಜೊತೆ ಮಹಾವೀರ ತೀರ್ಥಂಕರನೂ ವಿಭೂತಿ ಧರಿಸಿ ವೀರಶೈವನಾಗಿದ್ದಾನೆ!

ಇಂತಹುದೇ ಒಂದು ನಿದರ್ಶನ ತಿಪಟೂರಿನ ಬಳಿ ಇದೆಯೆಂದು ಕೇಳಿದ್ದೇನೆ. (ಅಲ್ಲಿಗೆ ಇನ್ನೂ ಹೋಗಲಾಗಿಲ್ಲ).

(3) ವಡ್ಡಾರಾಧನೆಯಲ್ಲೂ ಹಲವಾರು ಶಾಸನಗಳಲ್ಲೂ ಪ್ರಸಿದ್ಧವಾಗಿರುವ ಬಳ್ಳಾರಿ ಜಿಲ್ಲೆಯ ಕೋಗಳಿಯಲ್ಲಿ ಹನ್ನೊಂದನೇ ಶತಮಾನದ ಬಸದಿಯು ಹಾಳಾಗಿ ಈಗ ಕಂಬಗಳೂ ಮೇಲ್ಚಾವಣಿಯ ಕೆಲಭಾಗವೂ ಮಾತ್ರ ಉಳಿದಿವೆ. ನವರಂಗದ ಮೇಲ್ಭಾಗದಲ್ಲೆಲ್ಲ ಜೈನವಿಗ್ರಹಗಳನ್ನು ಕೆತ್ತಿದೆ; ಅಡ್ಡಪಟ್ಟಿಕೆಗಳ ಮೇಲೆಲ್ಲ ಜೈನ ವಿಗ್ರಹಗಳಿವೆ. ಶಾಸನಗಳಲ್ಲಿ ಚೆನ್ನಪಾರ್ಶ್ವನಾಥ ದೇವರು ಎಂದು ಕರೆದಿರುವ ಹತ್ತು ಅಡಿ ಎತ್ತರದ ಭವ್ಯವಿಗ್ರಹವನ್ನು ಈಗ ಜನ "ಬಸದಿ ದಿಣ್ಣೆಪ್ಪ" ಎಂದು ಕರೆಯುತ್ತಾರೆ: ಮಳೆ ಬಾರದಿದ್ದರೆ ಅದಕ್ಕೆ ಪೂಜೆಯೇ ಹೊರತು ಉಳಿದಂತೆ ಜನ ಆ ಕಡೆ ಗಮನವನ್ನೇ ಕೊಡುವುದಿಲ್ಲ. ಊರ ಮಧ್ಯೆ ಇರುವ ವೀರಭದ್ರ ದೇವಾಲಯವು ಮೂಲತಃ ಒಂದು ಬಸದಿಯೆಂದು ತೋರುತ್ತದೆ. ಕ್ರಿ.ಶ. 1502ರ ಹೊತ್ತಿಗೆ ಅದು ವೀರಭದ್ರ ದೇವಾಲಯವಾಗಿ ಮಾರ್ಪಾಟಾಗಿತ್ತು: ಏಕೆಂದರೆ ಕ್ರಿ. ಶ. 1502ರ ಕಾಲದ ಒಂದು ಶೈವಶಾಸನ ದೇವಾಲಯದ ಪಕ್ಕದಲ್ಲಿದೆ. ವೀರಭದ್ರನ ವಿಗ್ರಹದ ಪೀಠದ ಮೇಲಿನ ಶಾಸನ ಜೈನಶಾಸನವಾಗಿರುವಂತಿದೆ. ಬಾಗಿಲುವಾಡದ ಮೇಲೆ ಸುಣ್ಣ ತುಂಬಿರುವ ಚಿಕ್ಕ ವಿಗ್ರಹಗಳನ್ನು ಕೆತ್ತಿದೆ. ಎಲ್ಲಕ್ಕಿಂತ ಮುಖ್ಯವಾಗಿ, ದೇವಾಲಯದ ಮುಂದೆ ಐದು ಜಿನವಿಗ್ರಹಗಳನ್ನು ಕೆತ್ತಿರುವ ಒಂದು ಭಗ್ನಶಿಲೆ ಬೀದಿಯ ಪಕ್ಕದಲ್ಲಿ ಬಿದ್ದಿದೆ. ಪಾರ್ಶ್ವನಾಥನ ಭಗ್ನಬಸದಿಯ ಪಕ್ಕದ ಒಂದು ಗೂಡಿನಲ್ಲಿ ಒಂದು ಹೆಣ್ಣಿನ ತಲೆಯ ಸುಂದರ ಚಿತ್ರವಿದೆ: ಜೈನದೇವತೆಗಳಿಗೆ ಸಂಬಂಧಿಸಿದ ವಿಗ್ರಹದ ತಲೆ ಇರಬೇಕು.

(4) ಕೋಗಳಿಯಿಂದ ಮೂರು ಕಿಲೋಮೀಟರ್ ದೂರದಲ್ಲಿ ಒಂದು ತಾಂಡ ಇದೆ. ಅಲ್ಲಿಂದ ಹಗರಿಬೊಮ್ಮನಹಳ್ಳಿಗೆ ಹೋಗುವ ಕಾಲುದಾರಿಯಲ್ಲಿ ಮಾಲ್ವಿ ಎಂಬ ಒಂದು ಚಿಕ್ಕ ಗ್ರಾಮವಿದೆ. ಆ ಊರಿನ ಹನುಮಂತ ದೇವರ ಗುಡಿಯು

ಬದಿಯಲ್ಲಿ, ಬೀದಿಯ ಪಕ್ಕದಲ್ಲಿ ನಾಲ್ಕಡಿ ಎತ್ತರದ ಒಂದು ಕರಿಯ ಕಲ್ಲಿದೆ. ಅದರ ಮೇಲ್ಭಾಗದಲ್ಲಿ ಮಧ್ಯದಲ್ಲಿ ಒಂದು ದೊಡ್ಡ ತೀರ್ಥಂಕರನ ವಿಗ್ರಹವೂ ಅದರ ಬಲಕ್ಕೆ ಕುಳಿತಿರುವ ಗಂಡಿನ ಮತ್ತು ಎಡಕ್ಕೆ ಅದೇ ಭಂಗಿಯಲ್ಲಿ ಕುಳಿತಿರುವ ಹೆಣ್ಣಿನ ಚಿತ್ರಗಳೂ ಇವೆ. ಊರಿನಲ್ಲಿ ಯಾವ ಜೈನರೂ ಇಲ್ಲದಿದ್ದರೂ ಕೋಗಳಿಗೆ ಐದು ಮೈಲಿ ದೂರವಲ್ಲಿರುವ ಆ ಊರಲ್ಲಿ ಒಂದು ಕಾಲಕ್ಕೆ ಜೈನರು ಇದ್ದಿರಬೇಕು. ಶಿಲೆಯ ಮೇಲೆ ಯಾವ ಲಿಪಿಯೂ ಇಲ್ಲದಿದ್ದರೂ, ಅದೊಂದು ನಿಸಿದಿ ಕಲ್ಲು ಎಂಬ ಬಗ್ಗೆ ಅನುಮಾನ ಕಾಣಿಸದು. ನಿಸಿದಿ ಕಲ್ಲಿನ ಮೇಲೆ ವ್ಯಾಸಪೀಠದ ಮೇಲೆ ಪುಸ್ತಕ ಇಟ್ಟು ಕೊಂಡು ಓದುತ್ತಿರುವ ಒಬ್ಬ ಜೈನಗುರುವಿನ ಚಿತ್ರವಿರುತ್ತದೆ. ಮೇಲಿನದು ನಿಸಿದಿ ಕಲ್ಲು ಅಲ್ಲದಿದ್ದರೆ, ಮಾಸ್ತಿಕಲ್ಲು ಆಗಿರುವ ಸಾಧ್ಯತೆಗಳುಂಟು. ಸತ್ತವರು ಜೈನ ದಂಪತಿಗಳಾದ್ದರಿಂದ ಮಧ್ಯೆ ಜೈನವಿಗ್ರಹವನ್ನು ಕೆತ್ತಿದ್ದಾರೆ. ಅದೇನೇ ಇರಲಿ, ಅದೊಂದು ಜೈನಧರ್ಮದ ಕುರುಹು ಎಂಬುದು ಮಾತ್ರ ನಿಶ್ಚಿತ.

(5) ಹಂಪೆಯ ಹೇಮಕೂಟದ ಮೇಲಿನ ಚಾಲುಕ್ಯರ ಕಾಲದ ದೇವಾಲಯ ಗಳನ್ನು 'ಜೈನ ದೇವಾಲಯ'ಗಳೆಂದು ಕರೆಯಲು ಏನು ಕಾರಣವೋ ತಿಳಿಯದು : ಎಲ್ಲೂ ಜೈನ ಕುರುಹುಗಳಿಲ್ಲ ; ಅದರ ಬದಲು, ನರಸಿಂಹ, ಗಣೇಶನ ವಿಗ್ರಹಗಳು ಗೋಪುರದ ಮೇಲೆ ಸ್ಪಷ್ಟವಾಗಿ ಕಾಣಿಸುತ್ತವೆ.

ಈ ಚಿಕ್ಕ ಲೇಖನದಲ್ಲಿ ನನ್ನ ಗಮನಕ್ಕೆ ಬಂದ ಹೊಸ ಸಂಗತಿಗಳನ್ನು ಮಾತ್ರ ಪ್ರಸ್ತಾಪಿಸಿದ್ದೇನೆ. ಹರಪನಹಳ್ಳಿಗೆ ಎಂಟು ಮೈಲಿ ದೂರದಲ್ಲಿರುವ ನಂದಿ ಬೇವೂರಿ ನಲ್ಲಿ ಒಂದು ಜೈನಶಾಸನವನ್ನು ನಾನು ಗಮನಿಸಿರುವೆನಾದರೂ ಅದು ಪ್ರಕಟವಾಗಿರು ವುದು ಆಮೇಲೆ ನನ್ನ ಗಮನಕ್ಕೆ ಬಂತು. ಆ ಊರಿನ ಕೊನೆಯಪಕ್ಷ ಮೂರು ಶಾಸನಗಳು (ಅವು ಜೈನ ಅಲ್ಲ) ಅಪ್ರಕಟಿತ. ಕೋಗಳಿ ಸುತ್ತಮುತ್ತ ಸಮೀಕ್ಷೆ ನಡಸಿದರೆ ಹೆಚ್ಚಿನ ಜೈನ ಕುರುಹುಗಳು ಸಿಗುವ ಸಾಧ್ಯತೆಗಳಿವೆ. ಶಾಮನೂರಿನ ಶಾಸನ, ತೀರ್ಥಂಕರ ವಿಗ್ರಹಗಳ ಜೊತೆ ಸಮೀಪದ ಬೇತೂರಿನಲ್ಲಿ ಎರಡು ವರ್ಷಗಳ ಹಿಂದೆ ದೊರಕಿದ ಎರಡು ಜಿನವಿಗ್ರಹಗಳ ವಿಷಯವನ್ನೂ, ಶಾಮನೂರಿಗೆ ಇಪ್ಪತ್ತು ಮೈಲಿ ದೂರದ ಬಸವಾಪಟ್ಟಣ ಮತ್ತು ಸಿದ್ಧನ ಮಠಗಳಲ್ಲಿ ಈಚೆಗೆ ದೊರಕಿದ ಜೈನವಿಗ್ರಹಗಳ ವಿಷಯವನ್ನೂ ಸೇರಿಸಿ ದಾವಣಗೆರೆ ಪ್ರದೇಶದ ಜೈನಧರ್ಮದ ಬಗ್ಗೆಯೇ ಪ್ರತ್ಯೇಕವಾಗಿ ಬರೆಯಬಹುದು. ಅದು ಬೇರೊಂದು ಬರಹದ ವಿಷಯವೇ ಆಗುತ್ತದೆ.

---

# ನೇಮಿನಾಥ ಪುರಾಣದಲ್ಲಿ ಪರಿಷ್ಕರಣ

—ವಿದ್ವಾನ್ ಎನ್. ರಂಗನಾಥಶರ್ಮಾ

ಮಹಾಕವಿ ನೇಮಿಚಂದ್ರನು ತನ್ನ ನೇಮಿನಾಥ (ಅರ್ಧನೇಮಿ) ಪುರಾಣದಲ್ಲಿ ಕೆಲವೆಡೆ ಸಂಸ್ಕೃತ ಶ್ಲೋಕಗಳನ್ನು ರಚಿಸಿ ಸೇರಿಸಿದ್ದಾನೆ. ಲಿಪಿಕಾರರ ತಪ್ಪುಗಳಿಂದ ಆ ಶ್ಲೋಕಗಳು ರೂಪಗೆಟ್ಟು ವಿಕೃತವಾಗಿದ್ದು, ಕವಿಯು ರಚಿಸಿದ ಮೂಲಪಾಠ ಹೇಗಿದ್ದಿತೆಂಬುದು ದುರೂಹವಾಗಿದೆ. ಶ್ಲೋಕತಾತ್ಪರ್ಯವು ಕೂಡ ತಿಳಿಯದಂತಾಗಿರುವುದರಿಂದ ಇವುಗಳ ಪರಿಷ್ಕರಣ ಆವಶ್ಯಕ. ಇವುಗಳಲ್ಲಿ ಎರಡು ಶ್ಲೋಕಗಳು; ತ್ರಿಪದಿ (ತ್ರಿಪದಿ) ಯಲ್ಲಿರುವ ಸಂಸ್ಕೃತ ವಾಕ್ಯ ಇನ್ನೊಂದು. ಇವನ್ನು ನಾನು ತಿದ್ದಿ ಪರಿಷ್ಕರಿಸಿಕೊಟ್ಟಿದ್ದೇನಲ್ಲದೆ, ವಿದ್ವಜ್ಜನರ ಅವಗಾಹನೆಗಾಗಿ ವಿವರಣೆ ಸಹಿತ ಇಲ್ಲಿ ಮಂಡಿಸುತ್ತಿದ್ದೇನೆ. ಯಾರಾದರೂ ವಿದ್ವಾಂಸರು ಇದನ್ನು ಪರಿಶೀಲಿಸಿ, ಇನ್ನೂ ಉತ್ತಮವಾಗಿ ಪರಿಷ್ಕರಿಸಿಕೊಟ್ಟರೆ ಸ್ವಾಗತಾರ್ಹವೇ. ಉತ್ತಮವಾದ ತಿದ್ದುಪಡಿ ಬರಲೆಂಬುದೇ ನನ್ನ ಆಶಯ. ಕರ್ನಾಟಕ ವಿಶ್ವವಿದ್ಯಾಲಯವು ೧೯೬೮ರಲ್ಲಿ ಪ್ರಕಾಶಿಸಿದ ನೇಮಿನಾಥಪುರಾಣದಿಂದ ಮುಂದಿನದು ಉದ್ಧೃತವಾಗಿದೆ—

ಪ್ರಗಲ್ಭ ಪುರೋಹಿತನೊಬ್ಬನು ರಾಜವಲ್ಲಭೆ ಜಿನದತ್ತೆಯ ಮುಂದೆ ನಿಂತು ಅವಳನ್ನು ಆಶೀರ್ವದಿಸುತ್ತಾನೆ—

> ಲಕ್ಷ್ಮ್ಯೈ ತವ ಪ್ರಥಮಪುಣ್ಯಫಲಂ ಪ್ರಸೂತಾಂ
> ಶೀತಾಂಶು ಲಾಂಛನವತಾಂ ವಿತತಿ[1]ರ್ನಖಾನಾಂ ।
> ಖುಜ್ಮಂಜಲೀಚರಣಪಲ್ಲವ ಫುಲ್ಲಕಾನಾಂ
> ಶೋಭಾಜನಂ[2] ಜಿನಪತೇ ಫಲಿನಸ್ಯ[3] ನಿತ್ಯಂ ॥ ೨–೨೧

ಪಾಠಾಂತರ :—(1) ತೆ (ಪ). (2) ನರ್ಜಿ (3) ಶ್ಚ

ನನ್ನ ಪರಿಷ್ಕರಣ—

> ಲಕ್ಷ್ಮ್ಯೈ ತವ ಪ್ರಥಮಪುಣ್ಯಫಲಂ ಪ್ರಸೂತಾಂ
> ಶೀತಾಂಶುಲಾಂಛನವತಾಂ ವಿತತಿರ್ನಖಾನಾಂ ।
> ಸ್ರಜ್ಮಂಜರೀ ಚರಣಪಲ್ಲವಗಲ್ಲಕಾನಾಂ
> ಶೋಭಾಜನಿರ್ಜಿನಪತೇಃ ಫಲಿನಸ್ಯ ನಿತ್ಯಂ ॥

ಅರ್ಥವಿವರಣೆ :—ನಿತ್ಯವೂ ಫಲಿಸುವ ವೃಕ್ಷವಾದ ಜಿನೇಶ್ವರನ ನಖಗಳ ವಿತತಿಯು (ಸಮೂಹ) ನಿನ್ನ ಶ್ರೀಯಸ್ಸಿಗಾಗಿ ಶ್ರೇಷ್ಠವಾದ ಪುಣ್ಯಫಲವನ್ನು ಪ್ರಸವಿಸಲಿ – ಈಯಲಿ. ನಖಗಳು ಚಂದ್ರನ ಹೆಸರುಳ್ಳವು (ಸದೃಶವಾದವು). ನಖವಿತತಿಯಾದರೋ ಜಿನೇಶ್ವರನ ಚಂದ್ರಕಾಂತಸದೃಶವಾದ ಚರಣಪಲ್ಲವಗಳಿಗೆ ಶೋಭೆಯನ್ನುಂಟುಮಾಡುವ ಮಾಲಾರೂಪವಾದ ಪುಷ್ಪಗುಚ್ಛವಾದದ್ದು.

ಜಿನೇಶ್ವರನನ್ನು ಫಲಿಸುವ ವೃಕ್ಷವಾಗಿ ರೂಪಕ ಮಾಡಿಕೊಂಡಿರುವುದರಿಂದ ಆ ವೃಕ್ಷದಲ್ಲಿ ಪಲ್ಲವ, ಪುಷ್ಪ, ಫಲಗಳಿವೆ ಎಂಬ ವರ್ಣನೆ ಸುಂದರವಾಗಿದೆ.

ಟಿಪ್ಪಣಿ :— ಪ್ರಸೂತಾಂ='ಪ್ರಸೂತೇ' ಎಂಬ ಕ್ರಿಯಾಪದವಿದೆಯಷ್ಟೆ. ಅವರಲ್ಲಿರುವ 'ಷೂ' ಧಾತುವಿನ ಆಜ್ಞಾರ್ಥ (ಲೋಟ್) ಪ್ರಥಮಪುರುಷೈಕವಚನದ ರೂಪವಿದು. ಚರಣಪಲ್ಲವಗಲ್ಲಕಾನಾಂ=ಗಲ್ಲಕ ಅಥವಾ ಗಲ್ವಕ ಎಂಬ ಶಬ್ದಕ್ಕೆ ಚಂದ್ರಕಾಂತಶಿಲೆ ಅಥವಾ ಇಂದ್ರನೀಲ ಎಂಬ ಅರ್ಥವಿದೆ. (ನೋಡಿ. ಹರಿವಂಶ ೨-೬೪-೩ನೇ ಶ್ಲೋಕದ ನೀಲಕಂಠೀಯ ವ್ಯಾಖ್ಯಾನ: ಆಪ್ಟೆಯವರ ಸಂಸ್ಕೃತ-ಇಂಗ್ಲಿಷ್ ಕೋಶ). 'ಚರಣಪಲ್ಲವತಲ್ಲಜಾನಾಂ' ಎಂದೂ ಪರಿಷ್ಕರಿಸಬಹುದು. ತಲ್ಲಜ=ಶ್ರೇಷ್ಠ. ಆದರೆ ಇದಕ್ಕೆ ಮೂಲಪಾಠದ ಅಕ್ಷರಸಾದೃಶ್ಯವಿರುವುದಿಲ್ಲ. ಶೋಭಾಜನಿಃ=ಶೋಭಾಜನಕವಾದ. 'ಶೋಭಾಯಾಃ ಜನಿಃ ಯಸ್ಯಾಃ ಸಾ' ಎಂದು ಪಂಚಮೀ ಬಹುವ್ರೀಹಿ. 'ಜನಿರುತ್ಪತ್ತಿರುದ್ಭವಃ' – ಅಮರ. ಕೆಳಗೆ ಕೊಟ್ಟ ಪಾಠಾಂತರದಲ್ಲಿ 'ನರ್ಜಿ' ಎಂದಿದೆ. ಅದು 'ನಿರ್ಜಿ' ಆಗಬೇಕು. ಫಲಿನಸ್ಯ=ಅಕಾರಾಂತ ಶಬ್ದ. ಫಲಬರ್ಹಾಭ್ಯಾಮಿನಚ್ !

—ಕಾತ್ಯಾಯನ ವಾರ್ತಿಕ

2) ಇಬ್ಬರು ಅಕ್ಕರಿಗರು ವಸುದೇವಕುಮಾರನ ಬಳಿಗೆ ಬಂದು ಅವನನ್ನು ಹೊಗಳುತ್ತ ಹೇಳುತ್ತಾರೆ (ಮಹಾಪ್ರಧಾನಸೆಜ್ಜೆವಳ್ಳಪದ್ಮನಾಭದೇವಕಾರಿತಮುಮಪ್ಪ ನೇಮಿನಾಥಪುರಾಣದೊಳ್–ಎಂದು ಕವಿ ಹೇಳಿಕೊಂಡಿದ್ದಾನೆ. ಈ ಶ್ಲೋಕದಲ್ಲಿ ಸಚಿವ ಸೆಜ್ಜೆವಳ್ಳ ಪದ್ಮನಾಭದೇವನಿಗೂ ವಸುದೇವಕುಮಾರನಿಗೂ ಅಭೇದಾರೋಪವಿದೆ)—

> ಕೀರ್ತಾವಾ[1]ಜತಿ ಸೆಜ್ಜೆವಳ್ಳ ಸಚಿವಃ[2] ಶ್ರೀಪದ್ಮನಾಭಪ್ರಭೋ
> ತ್ರೈಲೋಕೇ[3]ಷ್ವ ಪ[4]ತಿಂ ವಿಜೇಯ ಸುಚಿರಂ ದೃಷ್ಟ್ವಾ[5] ಸವೀಭ[6]ಸ್ಫುಟಂ ।
> ಕಸ್ತೂರೀ ತಿಲಕೇನ ಲಕ್ಷ[7]ಣೇಕೃತೀ[8] ಚಂದ್ರಃ ಸಲಕ್ಷ್ಮಾಭತೇ
> ಕಂಠೇಕಾಳಯುತಿ ಪ್ರಸಿದ್ಧ ಮಗಮತ್ಸೇಪೋ ಹಿ[9] ಭೂಪೋಪಿ ಚ ॥

ಪಾಠಾಂತರ :—(1) ಜಿತ (2) ವ (3) ಕ್ಯೆ (4) ತಿಸ್ವಿಚಿ (5) ಷ್ಟ್ವಾ
(6) ತಿ (7) ಕ್ಷ್ಮಣೇ (8) ತೇ (9) ಪಿ

ಇದಕ್ಕೆ ನನ್ನ ಪರಿಷ್ಕಾರ ಹೀಗಿದೆ—

> ಕೀರ್ತಿರ್ವಾಂಛತಿ ಸೆಜ್ಜೆವಳ್ಳಸಚಿವಂ ಶ್ರೀಪದ್ಮನಾಭಪ್ರಭೋ
> ತ್ರೈಲೋಕ್ಯೇಽತಿಶುಚಿಂ ವಿಚಿತ್ರ ಸುಚಿರಂ ದೃಷ್ಟಃ ಸ ನೇತಿ ಸ್ಫುಟಮ್ ।
> ಕಸ್ತೂರೀತಿಲಕೋ ನ ಲಕ್ಷಣಕೃತೇ ಚಂದ್ರಃ ಸಲಕ್ಷ್ಮಾಯುತೇ
> ಕಂಠೇಕಾಲ ಇತಿ ಪ್ರಸಿದ್ಧಿಮಗಮತ್ ಶೇಷಾಹಿಭೂಷೋಽಪಿ ಚ ॥

ಅರ್ಥವಿವರಣೆ :— ಶ್ರೀ ಪದ್ಮನಾಭಪ್ರಭುವೆ. ಕೀರ್ತಿವಧು ಸೆಜ್ಜೆವಳ್ಳ ಸಚಿವನನ್ನು (ನಿನ್ನನ್ನು) ಬಯಸುತ್ತಾಳೆ. ಮೂರುಲೋಕಗಳಲ್ಲಿಯೂ ಅತಿಶುಚಿಯಾದ

(ನಿರ್ಮಲ) ವನನ್ನು ಅವಳು ಬಹುಕಾಲ ಹುಡುಕಿದರೂ ಅಂಥವನು ಇನ್ನೊಬ್ಬ ಕಾಣಸಿಗಲಿಲ್ಲ ಎಂಬುದು ಸ್ಫುಟವಾಗಿದೆ. ಕಸ್ತೂರೀತಿಲಕವು ಲಕ್ಷಣಯೋಗ್ಯವಾದದ್ದಲ್ಲ. ಚಂದ್ರನು ಕಳಂಕಸಹಿತನಾಗಿದ್ದಾನೆ. ಶೇಷಭೂಷಣನಾದ ಶಿವನು ಕಂಠೇಕಾಲ ಎಂದು (ನೀಲಕಂಠನೆಂದು) ಪ್ರಸಿದ್ಧಿಯನ್ನು ಪಡೆದಿದ್ದಾನೆ.

ವಿಷ್ಣು ಅಥವಾ ಶ್ರೀಕೃಷ್ಣನು ಅತ್ಯಂತ ನಿರ್ಮಲನಲ್ಲ, ಅವನ ಹಣೆಯಲ್ಲಿ ಕಪ್ಪಾದ ಕಸ್ತೂರೀತಿಲಕವಿದೆ. ಅದು ಅವಲಕ್ಷಣ. ಚಂದ್ರನು ಕಳಂಕಯುಕ್ತ. ಶಿವನು ನೀಲಕಂಠ. ಈ ಮೂವರಲ್ಲೂ ಕಪ್ಪು ಇದೆಯಾದ್ದರಿಂದ ಇವರನ್ನೂ ತ್ಯಜಿಸಿ ಕೀರ್ತಿಯೆಂಬ ವಧು ನಿನ್ನನ್ನು–ಅತಿಶುಚಿಯಾದವನನ್ನು ಬಯಸಿದ್ದಾಳೆ ಎಂದು ತಾತ್ಪರ್ಯ.

ಟಿಪ್ಪಣಿ :—ಕೀರ್ತಿರ್ವಾಂಛತಿ=ಇದನ್ನು 'ಕೀರ್ತಿಸ್ತ್ವಾಯತಿ' ಎಂದೂ ತಿದ್ದಬಹುದು. ಕೀರ್ತಿಃ=ಕೀರ್ತಿಯು, ತ್ವಾ=ನಿನ್ನನ್ನು. ಅಯತಿ=ಸೇರುತ್ತಾಳೆ. ಅಯತಿ ಎಂಬುದು ಪರಸ್ಮೈಪದದಲ್ಲೂ ಉಂಟು. 'ಉದಯತಿ ಹಿ ಶಶಾಂಕಃ ಕಾಮಿನೀಗಂಡಪಾಂಡುಃ'–ಮೃಚ್ಛಕಟಿಕ. ಈ ಪಕ್ಷದಲ್ಲಿ 'ಸೆಜ್ಜೆವಳ್ಳಸಚಿವ' ಎಂದು ಸಂಬೋಧನವಾಗಿಟ್ಟುಕೊಳ್ಳಬಹುದು. '...ಸಚಿವ' ಎಂದು ಪಾಠಾಂತರವೂ ಇದೆ. ಸಂಸ್ಕೃತದಲ್ಲಿ ಏಕಾರಕ್ಕೆ ಹ್ರಸ್ವವಿಲ್ಲವಾದರೂ 'ಸೆಜ್ಜೆವಳ್ಳ' ಎಂಬುದು ಅನುಕರಣವಾದ್ದರಿಂದ ಇಲ್ಲಿ ಹ್ರಸ್ವವಾಗಿ ಉಚ್ಚರಿಸಬೇಕೆಂಬುದು ವಿಶೇಷವಾಗಿ ಗಮನಾರ್ಹ.

ದೃಷ್ಟಃ ಸನೇತಿ ಸ್ಫುಟಂ='ನ+ಇತಿ–ನೇತಿ' ಎಂದು ಮೇಲ್ಕಂಡ ಅರ್ಥವಿವರಣೆಯಲ್ಲಿ ಪದವಿಭಾಗವನ್ನು ಮಾಡಿಕೊಳ್ಳಲಾಗಿದೆ. ಸ್ವರಸವಾದ ಇನ್ನೊಂದು ಅರ್ಥವೂ ಇಲ್ಲಿ ಸಾಧ್ಯ. ಹೇಗೆಂದರೆ, 'ನಾ+ಇತಿ=ನೇತಿ' ಎಂದು ಪದವಿಭಾಗ. ನಾ (ನೃಶಬ್ದ)=ಪುರುಷ. 'ಮೂರು ಲೋಕಗಳಲ್ಲಿ ಅತಿಶುಚಿಯಾದ ಒಬ್ಬನನ್ನು ಹುಡುಕಿದಮೇಲೆ ಆ ಪುರುಷನು ದೃಷ್ಟನಾದನೆಂಬುದು ಸ್ಫುಟ.' (ಅವನು ನೀನೇ!) ಆದ್ದರಿಂದ ಕೀರ್ತಿವಧು ನಿನ್ನನ್ನು ಬಯಸುತ್ತಿದ್ದಾಳೆ.

ಚಂದ್ರಃ ಸಲಕ್ಷ್ಮಾಯತೇ=ಇದನ್ನು 'ಚಂದ್ರಃ ಸಲಕ್ಷ್ಮಾಯತಃ' ಎಂದೂ ತಿದ್ದಬಹುದು. ಯತಃ=ಏಕೆಂದರೆ. ಆದರೆ ಇದು ಹತ್ತಿರದ ತಿದ್ದುಪಡಿಯಾಗುವುದಿಲ್ಲ.

ಲಕ್ಷಣಕೃತೇ='ಕಾವ್ಯಂ ಯಶಸೇಽರ್ಥಕೃತೇ ವ್ಯವಹಾರವಿದೇ' ಎಂಬ ಕಾವ್ಯಪ್ರಕಾರದ 'ಅರ್ಥಕೃತೇ' ಎಂಬ ಪ್ರಯೋಗದೊಡನೆ ಹೋಲಿಸಬಹುದು.

ಕಂಠೇಕಾಲಃ=ಇದು ಸಂಜ್ಞಾವಾಚಿಯಾದ್ದರಿಂದ ಅಲುಕ್‌ಸಮಾಸ (ಹಲದಂತಾತ್ ಸಪ್ತಮ್ಯಾಃ ಸಂಜ್ಞಾಯಾಂ (ಅಷ್ಟಾ. ೬-೩-೯)

3. ಇದು ವನವರ್ಣನೆಯಲ್ಲಿ ಬಂದಿದೆ—

ತ್ರಿಪದಿ ॥ ಕಾನೊ¹ಳಗೆ ಕನಪುಂಸಾ ನ ಗಂತಬ್ಯಮೆಂ
ದೀ ನಡೆದಪುವೆ ತಿಮಿರದೊಳೆನಿಪ್ಪ
ನಾನಾಹಿ ಹಸ್ತ² ಮಣಿದೀಪಂ ॥ ೩–೩೯

ಪಾಠಾಂತರ :—(1) ಕಾನೊಳಕ ಪುಂನಾನಗಂ ತಪೆಮೆಂ. ಪಾಪಗಳಕ ಪುಂನಾಗಗಂ
(2) ಮಸ್ತ

ನನ್ನ ಪರಿಷ್ಕರಣ ಹೀಗೆ—

ಕಾನೊಳಗೆ "ಕೇನಾಪಿ ಪುಂಸಾ ನಾಗಂತವ್ಯಂ" ಎಂ–
ದೇನ್ನಡೆದಪುವೊ ತಿಮಿರದೊಳೆನಿಪುದು
ನಾನಾಹಿಮಸ್ತಮಣಿದೀಪಂ ॥

ಅರ್ಥವಿವರಣೆ :—ಕಾಡಿನೊಳಗೆ "ಯಾವ ಪುರುಷನಿಂದಲೂ ಬರುವಿಕೆಯಾಗ ಬಾರದು" (ಯಾವ ಮನುಷ್ಯನೂ ಬರಬಾರದು) ಎಂದು ತಿಳಿಸುವುದಕ್ಕಾಗಿ ಸರ್ಪ ಗಳು ಕತ್ತಲಲ್ಲಿ ತಿರುಗಾಡುತ್ತಿವೆಯೋ–ಎಂಬುದನ್ನು ನಾನಾ ಸರ್ಪಗಳ ಶಿರಸ್ಸಿನಲ್ಲಿ ರುವ ಮಣಿದೀಪವು ತಿಳಿಸುವಂತೆ ಕಾಣುತ್ತದೆ. ಮಸ್ತ=ಮಸ್ತಕ.

ಯಾರೂ ಕಾಡೊಳಗೆ ಬರಕೂಡದೆಂದು ತಿಳಿಸುತ್ತ ಸರ್ಪಗಳು ಕಾವಲಾಗಿ ಗಸ್ತು ಹೊಡೆಯುತ್ತಿದ್ದವು – ಎಂದು ತಾತ್ಪರ್ಯ. ಉತ್ಪ್ರೇಕ್ಷಾಲಂಕಾರ. ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರಿಗಳು ಈ ತ್ರಿಪದಿಯನ್ನು ಲಕ್ಷಿಸಿ "ಮೊದಲ ಪಾದದ ಪಾಠಸ್ಥಾನ ಒಂದು ಪಾಠಗ್ರಂಥಿ" ಎಂದು ಬರೆದಿದ್ದಾರೆ. (ನೋಡಿ. ಕನ್ನಡ ಛಂದಃ ಸ್ವರೂಪ, ಪುಟ, ೪೦೫). ತ್ರಿಪದಿಯ ಲಕ್ಷಣವು ಈ ಪರಿಷ್ಕರಣದಲ್ಲಿ ಸರಿಯಾಗಿ ಸಮನ್ವಯಿಸುತ್ತದೆಯೆ–ಎಂಬುದನ್ನು ವಿದ್ವಜ್ಜನರು ಪರಿಶೀಲಿಸಬೇಕು. ತ್ರಿಪದಿಯ ಲಕ್ಷಣದಲ್ಲಿ ಮತಭೇದಗಳಿರುವುದರಿಂದ ಈ ಮಾತನ್ನು ಬರೆಯಬೇಕಾಯಿತು.

---

# 'ಕರಿದು ಮಾಡಿದಂ ನಿಜಯಶಮಂ'—ಸಮಸ್ಯೆ

—ಸಿ. ಪಿ. ಕೆ.

ಪಂಪ ತನ್ನ ಭಾರತದಲ್ಲಿ, ತನ್ನ ಪೂರ್ವಿಕನಾದ ಮಾಧವ ಸೋಮಯಾಜಿಯನ್ನು ಕುರಿತು ಬರೆಯುತ್ತ, ಕಡೆಯಲ್ಲಿ ಹೀಗೆ ಹೇಳಿದ್ದಾನೆ :

> ವರ ದಿಗ್ವನಿತೆಗೆ ಮಾಟದ
> ಕುರುಳಾ ತ್ರೈಭುವನಕಾಂ[ತೆಗಂ]ದಲ್ ಕಂಠಾ ।
> ಭರಣಮೆನೆ ಪರೆದ ತನ್ನ
> ಧ್ವರಧೂಮದೆ ಕರಿದು ಮಾಡಿದಂ ನಿಜಯಶಮಂ ॥ (೧೪–೪೪)

ಈ ಬಗ್ಗೆ ಡಿ. ಎಲ್. ನರಸಿಂಹಾಚಾರ್ಯರು ಬರೆಯುತ್ತಾರೆ :

"ಪಂಪನು (೪೧–೪೩)ನೆಯ ಪದ್ಯಗಳಲ್ಲಿ ಮಾಧವ ಸೋಮಯಾಜಿಯನ್ನು ಬಹುವಾಗಿ ಹೊಗಳಿ ಮೆಚ್ಚಿ ಈ ಪದ್ಯದಲ್ಲಿ ಅವನನ್ನು "ನಿಜಯಶಮಂ ಕರಿದು ಮಾಡಿದಂ" ಎಂದು ಹೇಳುವುದರಲ್ಲಿ ಔಚಿತ್ಯವೇನಿದೆ ? ದಿಗಂತವ್ಯಾಪಿಯೂ ಮೂರು ಲೋಕಗಳಲ್ಲಿ ಪ್ರಸಾರವುಳ್ಳದ್ದೂ ಆಗಿದ್ದ ಅವನ ಕೀರ್ತಿ–ಇದು ಬೆಳ್ಳಗೆ ಇರುವುದೆಂದು ಕವಿಸಮಯ–ಅವನು ಮಾಡಿದ ಯಾಗಗಳ ಧೂಮದಿಂದ ಕರಿದಾಯಿತು ಎಂದರೆ ಪ್ರಶಸ್ತಿಯ ಮಾತಲ್ಲ. ಈ ಪದ್ಯದಲ್ಲಿ ಏನೋ ಪಾಠದೋಷವಿರಬೇಕೆಂದು ತೋರುತ್ತದೆ. ಈ ಪದ್ಯವನ್ನು ಬರೆಯುವಾಗ ಪಂಪ ಬಾಣಭಟ್ಟನ ಈ ಕೆಳಗಿನ ಪದ್ಯವನ್ನು ಸ್ಮರಣೆಗೆ ತಂದುಕೊಂಡಿರುವನೆಂದು ತೋರುತ್ತದೆ :

> ದಿಶಾಮಲೀಕಾಲಿಕ ಭಂಗತಾಂ ಗತಃ
> ತ್ರಯೀವಧೂ ಕರ್ಣತಮಾಲಪಲ್ಲವಃ ।
> ಚಕಾರ ಯಸ್ಯಾಧ್ವರ ಧೂಮಸಂಚಯೋ
> ಮಲೀಮಸಃ ಶುಕ್ಲತರಂ ನಿಜಂ ಯಶಃ ॥

"ಇದು ಬಾಣನ 'ಕಾದಂಬರಿ'ಯ ಪ್ರಾಸ್ತಾವಿಕ ಶ್ಲೋಕಗಳಲ್ಲಿ ೧೯ನೆಯದು. ಇವರಲ್ಲಿ ಬಾಣ ತನ್ನ ತಂದೆಯಾದ ಚಿತ್ರಭಾನುವಿನ ಪ್ರಶಂಸೆಯನ್ನು ಮಾಡಿದ್ದಾನೆ. ಯಾರ ಯಾಗಧೂಮ ಸಮೂಹ ದಿಗ್ವನಿತೆಯರ ಲಲಾಟದಲ್ಲಿ ಕುರುಳುಗಳಾದುವೋ, ವೇದತ್ರಯಗಳೆಂಬ ಕಾಂತೆಯ ಕಿವಿಯಲ್ಲಿರುವ ತಮಾಲಪಲ್ಲವಗಳಾದುವೋ ಆ ಧೂಮವು ಮಲೀಮಸವಾಗಿದ್ದರೂ ಅವನ ಕೀರ್ತಿಯನ್ನು ಶುಕ್ಲತರವಾಗಿ ಮಾಡಿದವು —ಇದು ಪದ್ಯದ ಅಭಿಪ್ರಾಯ. ಅವನ ಕೀರ್ತಿ ಮೊದಲೇ ಬೆಳ್ಳಗೆ ಇತ್ತು. ಅದನ್ನು ಯಾಗಧೂಮದ ಹೊಗೆ ತಾನೇ ಕರಿದಾಗಿದ್ದರೂ ಹೆಚ್ಚು ಬೆಳ್ಳಗಾಗಿಸಿತು... ಇದನ್ನು ನೋಡಿದರೆ ಈ ಎಡೆಯಲ್ಲಿ ಪಂಪನ ಪದ್ಯ ಕೆಟ್ಟಿದೆಯೆಂದು ತೋರಿಬರುತ್ತದೆ. • "ಶುಕ್ಲತರಂ ಚಕಾರ" ಎಂಬ ಬಾಣನ ಮಾತುಗಳಿಗೆ ಪ್ರತಿಯಾಗಿ 'ಕರಿದು

ಮಾಡಿದಂ' ಎಂದು ಏಕೆ ಬರೆದ ಪಂಪ? ಇದು ಬಹುಶಃ 'ಕರಮೆ ಮಾಡಿದಂ' ಎಂದಿರಬಹುದೇನೊ? ಎಂದರೆ ಅತಿಶಯವಾಗುವಂತೆಯೆ ಮಾಡಿದನು ಎಂಬರ್ಥ ಬರುತ್ತದೆ. ಅಂತೂ ಈ ಪದ್ಯ ಒಂದು ಸಮಸ್ಯೆಯಾಗಿದೆ." [1]

ಪಂಪನ ಪೂರ್ವೋಕ್ತ ಪದ್ಯದ ಬಗೆಗೆ ಎಲ್. ಬಸವರಾಜು ಅವರ ಪ್ರತಿಕ್ರಿಯೆ:

"ಇಲ್ಲಿ ಅಧ್ವರಧೂಮದಿಂದ ತನ್ನ ಯಶಸ್ಸನ್ನು ಸೋಮಯಾಜಿಯು 'ಕರಿದು' ಮಾಡಿದುದಾಗಿ ಹೇಳುವಂತಿದೆ. ಪಂಪನ ಉದ್ದೇಶವಿದೇ ಆಗಿದ್ದಿದ್ದರೆ – ಮೇಲಣ ಮೂರು ಸಾಲುಗಳಲ್ಲಿ ಆ ಅಯಶಸ್ಕರವಾದ ಅಧ್ವರಧೂಮವನ್ನು ದಿಗ್ವನಿತೆಗೆ ಮಾಟದ ಕುರುಳೆಂದೂ, ತ್ರೈಭುವನಕಾಂತೆಗೆ ಕಂಠಾಭರಣವೆಂದೂ ಅತಿಶಯಿಸಿರುವುದು ಸಮಂಜಸವಾಗುವುದಿಲ್ಲ. ಈ ಕಾರಣಕ್ಕಾಗಿಯೇ-**ಕರಿದು** (ಮಾಡಿದಂ ನಿಜ ಯಶಮಂ) ಎಂಬುದನ್ನು **ಹಿರಿದು** (ಮಾಡಿದ ನಿಜಯಶಮಂ) ಎಂದು ತಿದ್ದಿಕೊಳ್ಳಬೇಕಾದುದು ಆ ಪದ್ಯದ ಒಟ್ಟಂದದ ಸಾರ್ಥಕತೆಯ ದೃಷ್ಟಿಯಿಂದ ಅನಿವಾರ್ಯ. ಹೀಗೆ **ಹಿರಿದು** ಎಂದಿದ್ದ ಮೂಲಪಾಠ **ಕರಿದು** ಎಂದಾದುದು ಲಿಪಿಕಾರ ಲೇಖಿನ ದೋಷದಿಂದಲ್ಲ, ಅಧ್ವರಧೂಮ ವಿರೋಧಿಗಳಾದ ಜೈನ ಪಂಡಿತರ ತಿದ್ದುಪಾಟಿನಿಂದ– ಎಂಬುದನ್ನು ಮರೆಯಬಾರದು." [2]

"ಕರಿದು ಮಾಡಿದಂ" ಎನ್ನುವಲ್ಲಿ ನಿಜವಾಗಿಯೂ ಪಾಠ ಕೆಟ್ಟಿದೆಯೆ ಎಂಬುದನ್ನು ತುಸು ವಿಚಾರಮಾಡಬೇಕು.

ನಮ್ಮ ಮುಂದಿರತಕ್ಕ ಪ್ರಶ್ನೆಗಳು ಎರಡು: ಮೊದಲನೆಯದಾಗಿ, ಮಾಧವ ಸೋಮಯಾಜಿಯನ್ನು ಅಷ್ಟೊಂದು ಹೊಗಳಿದವನು ಕಡೆಯಲ್ಲಿ "ಕರಿದು ಮಾಡಿದಂ ನಿಜಯಶಮಂ" ಎಂದು ನಿಂದಾತ್ಮಕವಾಗಿ ಬರೆದದ್ದೇಕೆ? ಎರಡನೆಯದಾಗಿ, ಬಾಣ "ಚಕಾರ...ಶುಕ್ಲತರಂ ನಿಜಂ ಯಶಃ" ಎಂದು ಬರೆದಿರುವಾಗ, ಪಂಪ ಅದನ್ನು ಬದಲಿಸಿದ್ದೇಕೆ? ಈ ಪ್ರಶ್ನೆಗಳಿಗೆ ಉತ್ತರಿಸುವುದು ಕಷ್ಟವಲ್ಲ.

ಮಾಧವ ಸೋಮಯಾಜಿಯ ಬಗೆಗೆ ಪಂಪನಿಗೆ ಬಹಳ ಮೆಚ್ಚುಕೆಯುಂಟು; ಅವನು ಯಾಗ ಮಾಡಿದ್ದಕ್ಕಾಗಿ ಮಾತ್ರ ವಿಷಾದ.[3] ಎಂತಲೇ 'ಎಲ್ಲ ಸರಿ, ಇದೊಂದರಲ್ಲಿ ಎಡವಿದ' ಎಂಬ ಧಾಟಿಯಲ್ಲಿ "ತನ್ನಧ್ವರಧೂಮದೆ ಕರಿದು ಮಾಡಿದಂ ನಿಜಯಶಮಂ" ಎಂಬ ಉದ್ಗಾರ. ಪಂಪನ ಧರ್ಮದ ಹಿನ್ನೆಲೆಯಲ್ಲಿ ಇದು ತೀರ ಸಹಜವಾದ ನಿಲುವು. ಬಾಣನ ಪದ್ಯದ ಹಿನ್ನೆಲೆ ಬೇರೆ: ಅವನೂ ಬ್ರಾಹ್ಮಣ, ಅವನ ಪೂರ್ವಜರೂ ಬ್ರಾಹ್ಮಣರು. ಆದ್ದರಿಂದ ಅವನು "ಚಕಾರ ಯಸ್ಯಾಧ್ವರ ಧೂಮ ಸಂಚಯೋ। ಮಲೀಮಸಃ ಶುಕ್ಲತರಂ ನಿಜಂ ಯಶಃ" ಎಂದು ಹೆಮ್ಮೆಯಿಂದ

1. 'ಪಂಪಭಾರತ ದೀಪಿಕೆ', ಪು. ೫೭೦–೭೧.

2. 'ಪಂಪ: ಒಂದು ಅಧ್ಯಯನ' (ಸಂ. ಜಿ. ಎಸ್. ಶಿವರುದ್ರಪ್ಪ), ಪು. ೩೨೨ (ಅಡಿಟಿಪ್ಪಣಿ).

3. ವಾಸ್ತವವಾಗಿ ಪಂಪನಿಗೆ ಬ್ರಾಹ್ಮಣ್ಯದ ಬಗ್ಗೆ ಗೌರವವಿದ್ದರೂ, ಅದರ ಕರ್ಮಕಾಂಡ ಅವನಿಗೆ ಅಗ್ರಾಹ್ಯ.

ಬರೆಯುವುದು ಸಾಧ್ಯವಾಯಿತು. ಆದರೆ ಜೈನನಾದ ಪಂಪ, ವಿಪ್ರನಾದ ತನ್ನ ಪೂರ್ವಜನ ಯಾಗವನ್ನು ಕುರಿತು ಹೆಮ್ಮೆ ಪಡಲಾರ.

"ಅಯಶಸ್ಕರವಾದ ಅಧ್ವರಧೂಮವನ್ನು ದಿಗ್ವನಿತೆಗೆ ಮಾಟದ ಕುರುಳೆಂದೂ ತ್ರೈಭುವನಕಾಂತೆಗೆ ಆಭರಣವೆಂದೂ ಅತಿಶಯಿಸಿರುವುದು" ಅಸಮಂಜಸವೇನೂ ಅಲ್ಲ. ಆ ಕೆಲಸವನ್ನು ಪಂಪ ಕವಿಯಾಗಿ ಮಾಡಿದ್ದಾನೆ. ಹೊಗೆಯ ಸುರುಳಿಗಳು ದಿಗ್ವನಿತೆಗೆ ಕುರುಳುಗಳಂತೆ, ತ್ರೈಭುವನಕಾಂತೆಗೆ ಕಂಠಾಭರಣದಂತೆ ಅಲ್ಲದೆ ಮತ್ತೇಂತು ಕಾಣುವುದು ಸಾಧ್ಯ ? (ಅಲ್ಲದೆ, ಆ ರೂಪಕಗಳು ಬಾಣನಿಂದ ಬಂದವೆಂಬುದನ್ನು ನೆನಪಿಡಬೇಕು). ಆ ಯಾಗಧೂಮ ಮನೋಹರವಾಗಿದ್ದರೂ ಮಾಧವಸೋಮಯಾಜಿಗೆ ಶೋಭಿಸಲಿಲ್ಲವಷ್ಟೆ.

ಅರಿಕೇಸರಿ ತನಗೆ ದಾನವಾಗಿ ಕೊಟ್ಟ ಅಗ್ರಹಾರವನ್ನು ಪಂಪ "ದೆಸೆಮುಖಧೂಮದಿಂ ದ್ವಿಜರ ಹೋಮದಿಂ..." ಇತ್ಯಾದಿಯಾಗಿ ಶ್ಲಾಘಿಸಿರುವುದೇಕೆ ಎಂಬ ಆಕ್ಷೇಪಣೆಗೂ[4] ಸಮಾಧಾನ ಹೇಳಬಹುದು. ಅಗ್ರಹಾರದ ಚಿತ್ರವೊಂದನ್ನು ಅವನು ವಸ್ತುನಿಷ್ಠವಾಗಿ ಕೊಟ್ಟಿದ್ದಾನೆ ; ಅಲ್ಲಿ ಏನೇನಿದ್ದುವು ಎಂಬುದನ್ನು ಪಟ್ಟಿಹಾಕಿದ್ದಾನೆ. ಆದರೆ ಮುಖಧೂಮದ ಬಗ್ಗೆ ಅವನಿಗೆ ಒಲವಿತ್ತು ಎಂದು ಹೇಳಲು ಆಧಾರವಿಲ್ಲ.

ಮತ್ತೆ ಬಾಣನ ಪದ್ಯದತ್ತ ತಿರುಗಬಹುದು. ಅದನ್ನು ಪಂಪ ಯಥಾವತ್ತಾಗಿ ಅನುವಾದಿಸಬೇಕಿತ್ತೆಂಬ ನಿರೀಕ್ಷೆ ಸಲ್ಲದು. ಕನ್ನಡ ಕವಿಗಳು ಎಷ್ಟೋ ಕಡೆ ಸಂಸ್ಕೃತ ಪದ್ಯಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಬರೆದರೂ, ಅವಕ್ಕೆ ತಮ್ಮದೇ ಆದ ತಿರುವು ಕೊಡುವುದು ಕಂಡುಬರುತ್ತದೆ. ಇಲ್ಲಿ ಪಂಪನೂ ಹಾಗೆ ಮಾಡಿದ್ದಾನೆ: ಅವನ ವೈಯಕ್ತಿಕ ಹಿನ್ನೆಲೆಯಲ್ಲಿ ಅದು ಅನಿವಾರ್ಯವೂ ಹೌದು. ('ತ್ರಯೀವಧು'ವನ್ನು ಅವನು 'ತ್ರೈಭುವನಕಾಂತೆ'ಯಾಗಿ ಮಾರ್ಪಡಿಸಿರುವುದೂ ಗಮನಾರ್ಹ).

"ಚಕಾರ...ಶುಕ್ಲತರಂ ನಿಜಂ ಯಶಃ" ಎಂಬ ಬಾಣನ ವಕ್ರೋಕ್ತಿಯಲ್ಲಿ ಒಂದು ಸ್ವಾರಸ್ಯವಿದೆ ; "...ಕರಿದು ಮಾಡಿದಂ ನಿಜಯಶಮಂ" ಎಂಬ ಪಂಪನ ಸ್ವಭಾವೋಕ್ತಿಯಲ್ಲಿ ಬೇರೊಂದು ಸ್ವಾರಸ್ಯವಿದೆ. ಬಿಳಿಯ ಕೀರ್ತಿಯನ್ನು ಮತ್ತಷ್ಟು ಬೆಳ್ಳಗೆ ಮಾಡಿದ, ಬಿಳಿಯ ಕೀರ್ತಿಯನ್ನು ಕಪ್ಪು ಮಾಡಿದ–ಎಂದು ತಾನೆ ಬಾಣ, ಪಂಪರ ಅಭಿಪ್ರಾಯಗಳು. ಬಿಳಿದು–ಮತ್ತಷ್ಟು ಬಿಳಿದು, ಬಿಳಿದು–ಕರಿದು ಎಂಬ ಜೋಡಿ ಮಾತುಗಳಲ್ಲಿರುವ ಅರ್ಥಸುಸಂಬದ್ಧತೆಯನ್ನೂ ಲಕ್ಷಿಸಬೇಕು. ಸೋಮಯಾಜಿ ತನ್ನ (ಬಿಳಿಯ) ಕೀರ್ತಿಯನ್ನು ಅತಿಶಯ (ಕರಮ) ಮಾಡಿದ ಎಂದೊ, ದೊಡ್ಡದು (ಹಿರಿದು) ಮಾಡಿದ ಎಂದೊ ಇಟ್ಟುಕೊಂಡರೆ, ಆ ಹೇಳಿಕೆಯಲ್ಲಿ ಏನು ಸ್ವಾರಸ್ಯವಿದೆ? ವಿಶೇಷವಿದೆ ? [5] ಬಾಣನ ಮಾತನ್ನೆ ಪಂಪ ಪ್ರತಿಧ್ವನಿಸಬೇಕಿತ್ತು ಎನ್ನುವುದಾದರೆ,

4. ಎಲ್. ಬಸವರಾಜು, ಪೂರ್ವೋಕ್ತ, ಪು. ೩೧.

5. ಇಲ್ಲಿ ಒಂದೊಂದು ಪದವನ್ನೂ ಲೆಕ್ಕಿಸಬೇಕು. ತಾತ್ಪರ್ಯವನ್ನು ಮಾತ್ರವಲ್ಲ.

ತನ್ನ ಕೀರ್ತಿಯನ್ನು ಇಷ್ಟಿಷ್ಟು ಬಿಳಿದು ಮಾಡಿದ" ಎಂಬರ್ಥದ ಮಾತುಗಳನ್ನು ಹಾಕಬೇಕಿತ್ತು. ಈಗಿರುವಂತೆ ಕಂದದ ಕಡೆಯ ಪಾದದಲ್ಲಿ ಅಷ್ಟಕ್ಕೆಲ್ಲ ಅವಕಾಶವಿಲ್ಲ. 'ಕರಿದು' ಎಂಬುದನ್ನು 'ಕರಮೆ' ಎಂದೊ 'ಓರಿದು' ಎಂದೊ ಊಹಿಸಿ ಒಂದೆರಡಕ್ಷರಗಳನ್ನು ಮಾತ್ರ ಬದಲಿಸುವುದರಿಂದ ಏನೂ ಪ್ರಯೋಜನವಿಲ್ಲ. (ಹಾಗೆ ನೋಡಿದರೆ, 'ಬಿಳಿದು ಮಾಡಿದಂ' ಎಂಬುದು ಮೂಲಪಾಠವಿದ್ದಿರಬಾರದೇಕೆ ಎಂದು ವಾದಕ್ಕಾಗಿ ಕೇಳಬಹುದು).

'ಓರಿದು' ಎನ್ನುವುದು ಜೈನಪಂಡಿತರ ತಿದ್ದುಪಾಡಿನಿಂದ 'ಕರಿದು' ಎಂದಾಯಿತು ಎಂಬ ಊಹೆಯನ್ನು ಒಪ್ಪುವುದು ಕಷ್ಟ. ಒಂದು ವೇಳೆ ಅಂಥ ತಿದ್ದುಪಾಡು ಆಗಿದ್ದರೆ, ಪಂಪಭಾರತದ ಎಲ್ಲ ಪ್ರತಿಗಳಲ್ಲೂ ಆಗಿದ್ದಿರಲಾರದು. ಆದರೆ ಈಗ ಯಾವೊಂದು ಪ್ರತಿಯಲ್ಲೂ 'ಓರಿದು' ಅಥವಾ 'ಕರಮೆ' ಎಂಬ ಪಾಠವಿಲ್ಲ. ಆದ್ದರಿಂದ 'ಕರಿದು' ಎಂಬುದೆ ಕವಿಪಾಠವಿರಬೇಕು. ಇದು ಅಂತಸ್ಸಂಭಾವ್ಯತೆಯ ಒರೆಗಲ್ಲಿನಲ್ಲಿ ತೇರ್ಗಡೆಯಾಗುವ ಪಾಠ. ಬಾಹ್ಯಸಾಕ್ಷ್ಯ ಇದನ್ನು ವಿರೋಧಿಸದೆ ಬೆಂಬಲಿಸುತ್ತದೆ, ಪರೋಕ್ಷವಾಗಿ.

---

[ಈ ಪದ್ಯದಲ್ಲಿ ಪಾಠಾಂತರದ ಅವಾಂತರವಿಲ್ಲ. 'ಓರಿದು' ಪಂಪನ ಕಾಲದ ಪದವಲ್ಲ. 'ಓರಿದು' ಆದರೆ ಅಂತಸ್ಸಂಭಾವ್ಯತೆ ಕಡಮೆ. 'ಕರಮೆ' ಎಂಬುದೂ ಅಷ್ಟೆ! ಇಲ್ಲಿ ಪಂಪ ಬಾಣನ ಚಮತ್ಕಾರಯುಕ್ತವಾದ ಹೇಳಿಕೆಯನ್ನು ಬೇರೆಯ ರೀತಿಯಲ್ಲಿ ಉಪಯೋಗಿಸಿದ್ದಾನೆ. ದಿಗ್ವನಿತೆಯ ಕುರುಳು ತ್ರೈಭುವನ ಕಾಂತೆಯ ಕರಿಮಣಿಸರ ಇವೇ ಅವನ ಕೀರ್ತಿಯ ಗುರುತುಗಳು. ಸಾಮಾನ್ಯವಾಗಿ ಬಿಳುಪಾಗಿರಬೇಕಾಗಿದ್ದುದು ಇಲ್ಲಿ ಕಪ್ಪಾಗಿದ್ದರೂ ಅವನ ಕೀರ್ತಿಗೇನೂ ಕಳಂಕ ತಟ್ಟಲಿಲ್ಲ. ಇದೊಂದು ಅಪವಾದವಾಗಿ ಅವನ ಕೀರ್ತಿ ಮತ್ತಷ್ಟು ಹೆಚ್ಚಿತು ಎಂಬುದು ಅರ್ಥವಿರಬೇಕು. ಸಂ.]

# ಶ್ರೀಕೃಷ್ಣದೇವರಾಯನ ದಿನಚರಿ

—ಡಾ॥ ಅರ್ಥಿಯಸ್

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಪ್ರಕಟಿಸಿರುವ 'ಶ್ರೀಕೃಷ್ಣದೇವರಾಯನ ದಿನಚರಿ' ಎಂಬ ಪುಸ್ತಕದ ಹೆಸರು ತುಂಬ ಕುತೂಹಲವನ್ನುಂಟುಮಾಡುವಂತಹದು. ಶ್ರೀಕೃಷ್ಣದೇವರಾಯನಂತಹ ಪ್ರಸಿದ್ಧ ಪ್ರಭುವಿನ ದಿನಚರಿ ಯಾವುದೇ ಇತಿಹಾಸದಲ್ಲಾದರೂ ಅತ್ಯುಪಯುಕ್ತವಾದ ದಾಖಲೆಯಾಗಬಲ್ಲದು. ಸಹಜವಾಗಿಯೇ ಕನ್ನಡಿಗರೆಲ್ಲರಿಗೂ ಸಂತೋಷವನ್ನುಂಟುಮಾಡಬಹುದಾದ ಈ ದಾಖಲೆ ಶ್ರೀಕೃಷ್ಣದೇವರಾಯನು ಬರೆದದ್ದೂ ಅಲ್ಲ, ಬರೆಸಿದ್ದೂ ಅಲ್ಲ, ಅವನ ಕಾಲದ್ದೂ ಅಲ್ಲ ಎಂದು ವಿಷಾದದಿಂದ ಹೇಳಬೇಕಾಗಿದೆ.

ಪ್ರಕೃತ ಪುಸ್ತಕದ ವಿಷಯವೆಲ್ಲಾ 'ರಾಯವಾಚಕಮು' ಎಂಬ ತೆಲುಗು ಗ್ರಂಥದ ಅನುವಾದವಾಗಿದೆ. 'Sources of Vijayanagara History' (1919) ಎಂಬ ಪ್ರಸಿದ್ಧ ಪುಸ್ತಕದ ಪೀಠಿಕೆಯಲ್ಲೇ 'ರಾಯವಾಚಕಮು' ಬಗೆಗೆ ಪ್ರಸ್ತಾವಿಸಲಾಗಿದೆ. 1933ರಲ್ಲೇ ಈ ಪುಸ್ತಕ ಆಂಗ್ಲ ಪೀಠಿಕೆಯೊಂದಿಗೆ ಪ್ರಕಟವಾಗಿದೆ. ಎನ್. ವೆಂಕಟರಮಣಯ್ಯ ಅವರು 'Studies in the Third Dynasty of Vijayanagar' (1935) ಮುಂತಾದ ಗ್ರಂಥಗಳಲ್ಲಿ ಹಾಗೂ ಲೇಖನಗಳಲ್ಲಿ 'ರಾಯವಾಚಕಮು' ಬಗೆಗೆ ಬರೆದಿದ್ದಾರೆ. 'ಶ್ರೀಕೃಷ್ಣದೇವರಾಯನ ದಿನಚರಿ'ಯನ್ನು ಓದಿ, ಅದರ ಸಂಪಾದಕರು ತಪ್ಪಾಗಿ ಅರ್ಥಮಾಡಿಕೊಂಡ ಅನೇಕ ಸಂದರ್ಭಗಳನ್ನು ಮೂಲಗ್ರಂಥವನ್ನು ನೋಡಿ ಸರಿಯಾಗಿ ಅರ್ಥಮಾಡಿಕೊಳ್ಳಬಹುದು. ಶ್ರೀಕೃಷ್ಣದೇವರಾಯನ ಬಗೆಗೆ ಈ ಪುಸ್ತಕ ಹಲವು ವಿಷಯಗಳನ್ನು ತಿಳಿಸುತ್ತದೆ ಎಂಬುದರಲ್ಲಿ ಸಂದೇಹವಿಲ್ಲ. ಇದರ ಉಪಯುಕ್ತತೆಯ ಬಗೆಗೂ ಯಾವ ಸಂದೇಹವೂ ಇಲ್ಲ. ಆದರೆ ತೆಲುಗು ಸಾಹಿತ್ಯದ ಪರಿಚಯವಿಲ್ಲದೆ ಶ್ರೀಕೃಷ್ಣದೇವರಾಯನ ದಿನಚರಿಯನ್ನು ಸರಿಯಾಗಿ ಅರ್ಥಮಾಡಿಕೊಳ್ಳುವುದು ಸಾಧ್ಯವಿಲ್ಲ. ಅದಕ್ಕೆ ಪ್ರಕೃತ ಪುಸ್ತಕವೇ ಸಾಕ್ಷಿ.

ತೆಲುಗು ಪುಸ್ತಕವನ್ನು ಕನ್ನಡಕ್ಕೆ ಅನುವಾದ ಮಾಡಿದವನು ಕೆಲವು ಮೂಲ ಪದ್ಯಗಳನ್ನು ಬಿಟ್ಟು, ಒಂದೆರಡು ವಾಕ್ಯಗಳನ್ನು ಸೇರಿಸಿ ಇನ್ನಷ್ಟು ಗೊಂದಲ ಉಂಟುಮಾಡಿದ್ದಾನೆ. 'ರಾಯವಾಚಕಮು' ಎಂಬುದು ಮೂಲಕೃತಿಯ ಹೆಸರು. 'ವಾಚಕ' ಎಂದರೆ ಸಮಾಚಾರ. ವಿಜಯನಗರ ರಾಜರನ್ನು ಕುರಿತು, ಅದರಲ್ಲೂ ಮುಖ್ಯವಾಗಿ ಶ್ರೀಕೃಷ್ಣದೇವರಾಯನನ್ನು ಕುರಿತು ಸಮಾಚಾರವನ್ನು ಒದಗಿಸಿರುವುದರಿಂದ 'ರಾಯವಾಚಕಮು' ಎನ್ನಲಾಗಿದೆ. 'ಶ್ರೀಕೃಷ್ಣದೇವರಾಯನ ದಿನಚರಿ'ಯ ಕೊನೆಯ ಸಾಲುಗಳನ್ನು ಗಮನಿಸಿ: 'ಇದು ಯಿಂದಿನವರೆಗೆ ನಡೆದ ಪ್ರವರ್ತಕಗಳು।

ಯಿನ್ನುಮೇಲೆ ನಡೆದ ವರ್ತಮಾನಗಳಿಗೆ ಬಿನ್ನಹಂ ಮಾಡಿ ಕಳುಹಿಸೇನು ಚಿತ್ತಕ್ಕೆ ಪರಾಮರಿಸಿಕೊಳ್ಳ ಚಿತ್ತೈಸುವುದು ಇಂತಿ ಬಿನ್ನಹ.' ವಿಜಯನಗರದ ಸಮಾಚಾರ ವನ್ನು ಯಾರೋ ಬರೆದು ಕಳುಹಿಸಿದ ವಿಷಯವನ್ನು ಈ ಕೆಲವು ಸಾಲುಗಳು ಸ್ಪಷ್ಟ ಪಡಿಸುತ್ತವೆ. ಮೂಲಕೃತಿಯ ಪ್ರಾರಂಭದ ಸಾಲುಗಳನ್ನು ನೋಡಿ: "ಶ್ರೀಮತ್ ಸಕಲ ಗುಣಸಂಪನ್ನರಾದ, ಮಹಾಮೇರು ಸಮಾನ ಧೀರರಾದ, ಅಖಂಡ ಲಕ್ಷ್ಮೀ ಪ್ರಸನ್ನರಾದ ಶ್ರೀಮನ್ಮಹಾಮಂಡಲೇಶ್ವರ ರಾಜಮಾನ್ಯ ಮಹಾರಾಜರಾಜಶ್ರೀ ಕಾಶೀ ವಿಶ್ವನಾಥನಾಯನಯ್ಯನವರ ದಿವ್ಯಶ್ರೀ ಪಾದಪದ್ಮಗಳಿಗೆ ದೇವರವರ ಸ್ಥಾನಾಪತಿ ಭಕ್ತಪರಾಧೀನ ಸದ್ವಿನಯ ಭಯಭಕ್ತಿಗಳಿಂದ ಮಾಡುವ ಬಿನ್ನಹ.

ವಿದ್ಯಾನಗರದಲ್ಲಿ ವೀರನರಸಿಂಹರಾಯರು ಬ್ರಾಹ್ಮೀ ಮುಹೂರ್ತದಲ್ಲಿ ಎದ್ದು ಆರಾಧ್ಯರ ನಾಮಾವಳಿಗಳನ್ನು ಅಧ್ಯಾತ್ಮ ಸಂಕೀರ್ತನೆಗಳನ್ನು..." (ಅನುವಾದ).

ಕನ್ನಡ ಕೃತಿಯಲ್ಲಿ ಪ್ರಾರಂಭದ ಸಾಲುಗಳನ್ನು ಬಿಡಲಾಗಿದೆ. 'ವೀರನರಸಿಂಹ ರಾಯರು' ಎಂದಿರುವ ಕಡೆ ಬೇಕೆಂದೇ 'ವಿದ್ಯಾನಗರದಲ್ಲಿ ಕೃಷ್ಣರಾಯರು' ಎಂದು ಸೇರಿಸಲಾಗಿವೆ. 'ವಿದ್ಯಾನಗರದಲ್ಲಿ' ಎಂಬುದು ಪುನರುಕ್ತವಾಗಿದೆ. ಅದು ಅನಗತ್ಯ ವಾಗಿ, ಬೇಕೆಂದೇ ಸೇರಿಸಿರುವುದು ಸ್ಪಷ್ಟವಾಗಿದೆ. 'ಕೃಷ್ಣರಾಯರ ದಿನಚರಿಯು ಕೃತ್ಯಗಳ ವಿಸ್ತಾರ' ಎಂಬುದು ಕೂಡ ಅನುವಾದಕನು ಸೇರಿಸಿದ್ದಾನೆ. ಇದರಿಂದಲೇ ಮೂಲಕ್ಕೆ ವಿರುದ್ಧವಾದ, ತಪ್ಪು ತಿಳಿವಳಿಕೆಗೆ ಎಳೆಯುವ 'ಶ್ರೀಕೃಷ್ಣದೇವರಾಯನ ದಿನಚರಿ' ಎಂಬ ಹೆಸರು ಸಿದ್ಧವಾಯಿತು.

ಇನ್ನು ಸಂಪಾದಕರು ಮಾಡಿದ ಘೋರಾತಿಘೋರ ದೋಷವೆಂದರೆ 'ದೊರೆಯ ಅಪ್ಪಣೆಯಂತೆ ಇದನ್ನು ಮುಕ್ಕುತಿಮ್ಮಯ್ಯ ಮತ್ತು ಮಾದಯ್ಯನವರ ಮಲ್ಲಯ್ಯ ಎಂಬವರು ಬರೆದರು' ಎಂದು ನಿರ್ಣಯಿಸಿರುವುದು. ಮುಕ್ಕುತಿಮ್ಮನ ಮತ್ತು ಮಾದಯ್ಯಗಾರಿ ಮಲ್ಲನ ಶ್ರೀಕೃಷ್ಣದೇವರಾಯನ ಆಸ್ಥಾನದ ತೆಲುಗು ಕವಿಗಳಾಗಿ ದ್ದರು. 'ದಿನಚರಿ'ಯ ಕೊನೆಯಲ್ಲಿ "ಮುಕ್ಕುತಿಮ್ಮಯ । ಮಾದಯ್ಯನವರ ಮಲ್ಲಯ್ಯನವರು **ಮೊದಲಾದವರನ್ನು** ಕೃತಿಯ ಹೇಳಿಕೊಂಡು ಬರಹೇಳಿ ಅಪ್ಪಣೆ ಕೊಟ್ಟರು" ಎಂದಿದೆ. ಶ್ರೀಕೃಷ್ಣದೇವರಾಯನು ತನ್ನ ಆಸ್ಥಾನದಲ್ಲಿದ್ದ ಈ ಕವಿ ಗಳನ್ನು ಕಾವ್ಯ ಬರೆದು ಸಮರ್ಪಿಸಬೇಕೆಂದು ಕೇಳಿಕೊಂಡನು. ಅಷ್ಟೇ ಹೊರತು, ಈ 'ದಿನಚರಿ'ಯನ್ನು ಬರೆಯಬೇಕೆಂದು ಕೇಳಿಕೊಂಡಿಲ್ಲ. ಹಾಗಾದರೆ ತಿಮ್ಮಯ, ಮಲ್ಲಯ್ಯ ಮೊದಲಾದವರೆಲ್ಲರೂ ಸೇರಿ ಇದನ್ನು ಬರೆದರೆಂದರ್ಥವೇ ?

'ರಾಯವಾಚಕಮು' ಲೇಖಕನ ಹೆಸರು ತಿಳಿಯದು. ಆದರೆ ಅವನು ಕಾಶೀ ವಿಶ್ವನಾಥನಯ್ಯನವರ ಸ್ಥಾನಾಪತಿ ಆಗಿದ್ದನೆಂಬುದು ಮಾತ್ರ ಸ್ಪಷ್ಟವಾಗಿದೆ. ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಸಾಮಂತರು ವಿಜಯನಗರದ ವಿಷಯಗಳನ್ನು ತಿಳಿದುಕೊಳ್ಳಲು ಸ್ಥಾನಾಪತಿ ಎಂಬ ಹೆಸರಿನ ಉದ್ಯೋಗಿಗಳನ್ನು ನಿಯಮಿಸು

ತ್ತಿದ್ದರು. ಅಂತಹ ಸ್ಥಾನಾಪತಿಗಳಲ್ಲೊಬ್ಬನು ಇದನ್ನು ಬರೆದಿದ್ದಾನೆ. ಇದನ್ನೇ ಆಧಾರವಾಗಿಟ್ಟುಕೊಂಡು 17ನೆಯ ಶತಮಾನದ ಕುಮಾರ ಧೂರ್ಜಟಿ 'ಕೃಷ್ಣರಾಯ ವಿಜಯಮು' ಎಂಬ ಕಾವ್ಯವನ್ನು ಬರೆದಿದ್ದಾನೆ. ಆದುದರಿಂದ 'ರಾಯವಾಚಕಮು' 17ನೆಯ ಶತಮಾನದ ಪೂರ್ವಾರ್ಧದಲ್ಲಿ ಅಥವಾ 16ನೆಯ ಶತಮಾನದಲ್ಲಿ ರಚಿತ ವಾದುದೆಂದು ತಿಳಿಯುತ್ತದೆ. ವಿಜಯನಗರ ವೃತ್ತಾಂತವನ್ನು ತಿಳಿದವರಿಂದ ಕೇಳಿ ಇದನ್ನು ಬರೆದಿರುವುದಾಗಿ ಪ್ರಾರಂಭದ ಕೆಲವು ಪದ್ಯಗಳಲ್ಲಿ ಲೇಖಕ ಬರೆದಿದ್ದಾನೆ. ಆದುದರಿಂದ ಶ್ರೀಕೃಷ್ಣದೇವರಾಯನ ಕಾಲದವನೇ ಆದ ಸ್ಥಾನಾಪತಿಯೊಬ್ಬನು 'ರಾಯವಾಚಕ'ವನ್ನು ಬರೆದಿರಬೇಕು ಅಥವಾ ಈ ವಿಷಯಗಳನ್ನು ಬೇರೆಯವರಿಂದ ತಿಳಿದ ಅನಂತರ ಕಾಲದ ಸ್ಥಾನಾಪತಿಯೊಬ್ಬನು ಬರೆದಿರಬೇಕು.

'ರಾಯವಾಚಕ'ವೇ 'ಶ್ರೀಕೃಷ್ಣದೇವರಾಯನ ದಿನಚರಿ'ಯನ್ನು ಏಕೆ ಅನುಸರಿಸಿರಬಾರದು ಎಂದು ಯಾರಾದರೂ ಪ್ರಶ್ನಿಸಬಹುದು. 'ದಿನಚರಿ'ಯನ್ನು ಸೂಕ್ಷ್ಮವಾಗಿ ಪರಿಶೀಲಿಸಿದವರಿಗೆ ಅದು ತೆಲುಗು ಮೂಲದಿಂದ ಬಂದುದೆಂದು ಸ್ಪಷ್ಟವಾಗುತ್ತದೆ. ಏಕಾಮ್ರನಾಥನ 'ಪ್ರತಾಪಚರಿತ್ರ' ಮತ್ತು ಒಬ್ಬ ಅಜ್ಞಾತ ಲೇಖಕನ 'ಸಭಾಪತಿ ವಚನಮು' ಎಂಬ 16ನೆಯ ಶತಮಾನದ ತೆಲುಗು ಗ್ರಂಥಗಳಿಂದ ಹಲವು ಭಾಗಗಳನ್ನು 'ರಾಯವಾಚಕಮು' ಉಪಯೋಗಿಸಿಕೊಂಡಿದೆ. ಇವೆಲ್ಲ ಕನ್ನಡ 'ದಿನಚರಿ'ಯಲ್ಲೂ ಬಂದಿವೆ. 'ರಾಯವಾಚಕಮು' ಅನಂತರ ಕಾಲದಲ್ಲಿ 'ಕೃಷ್ಣರಾಯ ವಿಜಯಮು' ಎಂಬ ಹೆಸರಿನಲ್ಲಿ ಕಾವ್ಯರೂಪಕ್ಕೆ ಪರಿವರ್ತಿತವಾಗಿದೆ. 'ರಾಯವಾಚಕ'ದಲ್ಲಿ ತೆಲುಗು ಕವಿಗಳ ಕಾವ್ಯಗಳಿಂದ ಪದ್ಯಗಳನ್ನು ಉದ್ಧರಿಸಿಕೊಡಲಾಗಿದೆ. ಬದ್ದೆನನ 'ನೀತಿ ಸಾರ ಮುಕ್ತಾವಳಿ', ಪೋತನನ 'ಆಂಧ್ರಮಹಾಭಾಗವತ' ಮುಂತಾದ ಕೃತಿಗಳಿಂದ ಸ್ವೀಕರಿಸಿದ ಈ ಪದ್ಯಗಳನ್ನು ಕನ್ನಡ ಅನುವಾದದಲ್ಲಿ ಬಿಡಲಾಗಿದೆ. ಒಂದು ಪದ್ಯ ಕನ್ನಡ ಅನುವಾದದಲ್ಲೂ ಸೇರಿಕೊಂಡು ಸಂಪಾದಕರಿಗೆ ತಲೆನೋವು ತಂದಿದೆ. 'ಈ ಪದ್ಯ ದೋಷಪೂರ್ಣ' ಎಂದು ಸಂಪಾದಕರು ಅಡಿ ಟಿಪ್ಪಣಿಯಲ್ಲಿ ಸೂಚಿಸಿರುವುದು ಸೋಜಿಗದ ಸಂಗತಿ. ಅದು ತೆಲುಗು ಪದ್ಯ—

> ನ್ಯಾಯಮು ಪ್ರಜಾಪಿತುರತುನು
> ಪಾಯಮು ಪ್ರಜಾತವಿ ಮಿಸರಿತುಪಾಯ್ಕುಂಬಗುಟಂ
> ನ್ಯಾಯಮು ಭಂಡಾರಮು ನರ
> ನಾಯಕಲಲಿನಂಡ್ರು ಕೀರ್ತಿನಾರಾಯಣ.

ಇದರ ಸರಿಯಾದ ರೂಪ ಹೀಗಿದೆ ('ರಾಯವಾಚಕ'ದಿಂದ)

> ನ್ಯಾಯಮು ಪ್ರಜಪೆಕ್ಕುವಕು ನು
> ಪಾಯಮು ಪ್ರಜಕಲಿಮಿ ಸಿರಿಕುಪಾಯಂ ಬಗುಟಂ
> ನ್ಯಾಯಮು ಭಂಡಾರಮು ನರ
> ನಾಯಕುಲಕುನು ನಂಡ್ರು ಕೀರ್ತಿ ನಾರಾಯಣುಡಾ!

'ದಿನಚರಿ'ಯ ಪ್ರಸ್ತಾವನೆಯಲ್ಲಿ (ಪು. xvi) ಪ್ರಧಾನ ಸಂಪಾದಕರು 'ಓರುಗಲ್ಲು (ಒರಿಸ್ಸಾದ)' ಎಂದು ಬರೆದಿರುವುದು ಇನ್ನೂ ಸೋಜಿಗದ ಸಂಗತಿ. ಕಾಕತೀಯ ಪ್ರತಾಪರುದ್ರನ ರಾಜಧಾನಿಯಾಗಿದ್ದ ಓರುಗಲ್ಲು (ಈಗಿನ ವರಂಗಲ್ಲು) ಆಂಧ್ರದಲ್ಲಿದೆ. ಕಾಕತೀಯ ಪ್ರತಾಪರುದ್ರನ ಬಗೆಗೆ ಕರ್ನಾಟಕದ ಇತಿಹಾಸದಲ್ಲೂ ಅನೇಕ ಉಲ್ಲೇಖಗಳು ಬರುತ್ತವೆ. ಒರಿಸ್ಸಾದ ಗಜಪತಿ ಬೇರೆ; ಓರುಗಲ್ಲಿನ ಪ್ರತಾಪರುದ್ರನೇ ಬೇರೆ. ಪ್ರತಾಪರುದ್ರ 14ನೆಯ ಶತಮಾನದವನು. ಅವನನ್ನು ಶ್ರೀಕೃಷ್ಣದೇವರಾಯ ಗೆಲ್ಲುವುದು ಅಸಂಭವ. 'ದಿನಚರಿ'ಯಲ್ಲಿ ಪ್ರತಾಪರುದ್ರನನ್ನು ದೆಹಲಿಯ ಸುಲ್ತಾನನು ಸೆರೆಹಿಡಿದ ಹಳೆಯ ವಿಷಯವನ್ನು ಪ್ರಸ್ತಾವಿಸಿದ್ದಾರಷ್ಟೆ. ಇದು ಕೃಷ್ಣದೇವರಾಯನ ಸಮಕಾಲೀನ ಘಟನೆಯೆಂದು ತಿಳಿದು ಸಂಪಾದಕರು ಉಲ್ಲೇಖಿಸಿರುವುದು ತಪ್ಪು.

'ರಾಯವಾಚಕಮು' ಮತ್ತು ಅದರ ಅನುವಾದವಾದ 'ಶ್ರೀಕೃಷ್ಣದೇವರಾಯನ ದಿನಚರಿ' ಬೇರೆ ರೀತಿಯಿಂದ ಉಪಯುಕ್ತವಾದುವು. ಇದು ಶ್ರೀಕೃಷ್ಣದೇವರಾಯನ ಕಾಲದ್ದಲ್ಲದಿದ್ದರೂ ವಿಜಯನಗರ ಸಾಮ್ರಾಜ್ಯದ ಬಗೆಗೆ ಅನೇಕ ಮಾಹಿತಿಗಳನ್ನು ಒದಗಿಸುವ ಗ್ರಂಥ. ಆ ಕಾಲದ ಆಡಳಿತ, ರಾಜೋದ್ಯೋಗಿಗಳು, ಸೇನಾ ವಿವರಗಳು, ದಿಗ್ವಿಜಯ ವೃತ್ತಾಂತ, ವೇಷ-ಭಾಷೆಗಳು, ದಂಡನ ವಿಧಾನ ಮುಂತಾದ ವಿಷಯಗಳನ್ನು ಈ ಗ್ರಂಥ ತಿಳಿಸಿಕೊಡುತ್ತದೆ. ಶ್ರೀ ಎನ್. ವೆಂಕಟರಮಣಯ್ಯ ಹೇಳಿದ ಮಾತುಗಳು ಗಮನಾರ್ಹವಾದುವು: "Whatever be the date of its composition, it stands the test of facts remarkably well. The genuineness of the various items of information which it supplies can be proved by a comparison with the inscriptions, and the contemporary Prabandhas and the Portuguese records." (Studies in the History of the Third Dynasty of Vijayanagar, Madras, 1935, p. xxvi)

---

# ಡಾ॥ ಆರ್ವಿಯಸ್ ಅವರ ಲೇಖನಕ್ಕೆ ಪ್ರತಿಕ್ರಿಯೆ

—ಸಂ.

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನವು ಪ್ರಕಟಿಸಿರುವ 'ಶ್ರೀಕೃಷ್ಣದೇವರಾಯನ ದಿನಚರಿ' ಎಂಬ ಪ್ರಕಟನೆಯ ಬಗ್ಗೆ ತೆಲುಗು ವಿದ್ವಾಂಸರಾದ ಡಾ॥ 'ಆರ್ವಿಯಸ್' ಅವರು ಗ್ರಂಥದ ಸಂಪಾದನೆಯ ವಿಚಾರದಲ್ಲಿ ಕೆಲವು ಕುಂದುಕೊರತೆಗಳನ್ನು ಕಾಣಿಸಿ ಬರೆದು ಕಳಿಸಿರುವ ಲೇಖನವನ್ನು ಪ್ರಕಟಿಸಿದ್ದೇವೆ. ಲೇಖಕರು ತಮ್ಮ ಅಭಿಪ್ರಾಯ ದಲ್ಲಿ ಕುಂದುಕೊರತೆ ಎಂದು ಎತ್ತಿ ಕಾಣಿಸಿರುವ ಕೆಲವು ವಿಷಯಾಂಶಗಳ ಬಗ್ಗೆ ಗ್ರಂಥದ ಪ್ರಧಾನ ಸಂಪಾದಕರಾದ ಪ್ರೊ॥ ಎಂ. ವಿ. ಸೀತಾರಾಮಯ್ಯನವರ ಅಭಿಪ್ರಾಯವನ್ನು ಕೇಳಲಾಗಿ, ಅವರು ಈ ಕೆಳಗಿನಂತೆ ತಮ್ಮ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿದ್ದಾರೆ :

" 'ಶ್ರೀಕೃಷ್ಣದೇವರಾಯನ ದಿನಚರಿ'ಯನ್ನು ಕುರಿತು ಡಾ॥ ಆರ್ವಿಯಸ್ ಅವರು ಬರೆದಿರುವ ಲೇಖನದಲ್ಲಿ ಸಂಪಾದಕರು ಹಾಗೂ ಪ್ರಧಾನ ಸಂಪಾದಕರು ಗ್ರಂಥ ಸಂಪಾದನೆಯ ವಿಷಯದಲ್ಲಿ ಕೆಲವು ತಪ್ಪುಗಳನ್ನು ಮಾಡಿದ್ದಾರೆ, 1933ರಲ್ಲಿ ಪ್ರಕಟವಾದ 'ರಾಯ ವಾಚಕಮು' ಎಂಬ ಗ್ರಂಥದ ಕನ್ನಡ ಅನುವಾದ, "ಶ್ರೀಕೃಷ್ಣ ದೇವರಾಯನು ಬರೆದದ್ದೂ ಅಲ್ಲ, ಬರೆಸಿದ್ದೂ ಅಲ್ಲ, ಅವನ ಕಾಲದ್ದೂ ಅಲ್ಲ." ಎಂದು ಅಭಿಪ್ರಾಯಪಟ್ಟಿದ್ದಾರೆ. ಈ ಗ್ರಂಥವನ್ನು ಕೃಷ್ಣದೇವರಾಯ ಬರೆದದ್ದು ಎಂದು ಸಂಪಾದಕರು ಎಲ್ಲೂ ಹೇಳಿಲ್ಲ. ಗ್ರಂಥದ ಕೊನೆಯ ವಾಕ್ಯಗಳಲ್ಲಿ, ಕೃಷ್ಣದೇವ ರಾಯನು "ತಾವೂ '**ಕೃತಿಯ ಹೇಳಿಸಬೇಕು**' ಎಂದು ಅಪೇಕ್ಷೆಪಟ್ಟು 'ಮುಕ್ಕು ತಿಮ್ಮಯ್ಯ । ಮಾದಯ್ಯನವರ ಮಲ್ಲಯ್ಯನವರು ಮೊದಲಾದವರನ್ನು **ಕೃತಿಯ ಹೇಳಿಕೊಂಡು** ಬರಹೇಳಿ ಅಪ್ಪಣೆ ಕೊಟ್ಟರು" ಎಂದು ನಿರೂಪಿತವಾಗಿದೆ. ಈ ವಾಕ್ಯ ಗಳು 'ರಾಯವಾಚಕಮು' ಗ್ರಂಥದಲ್ಲಿ ಹೇಗೆ ಇವೆ ಎಂಬುದನ್ನು ಲೇಖಕರು ತಿಳಿಸಿ ದ್ದರೆ ಚೆನ್ನಾಗಿತ್ತು. ಅಲ್ಲಿ ಹೇಗಾದರೂ ಇದ್ದುಕೊಳ್ಳಲಿ. ಕನ್ನಡ ಗ್ರಂಥದ ವಾಕ್ಯ ಗಳಲ್ಲಿ ಅಂತೂ ಸಂದೇಹಕ್ಕೆ ಅವಕಾಶವಿಲ್ಲ. 'ಕೃತಿಯ **ಹೇಳಿಸಬೇಕು**' ಎಂದರೆ '**ಬರೆಸಿದ್ದು**' ಅಥವಾ '**ಹೇಳಿಸಿ ಬರೆಸಿದ್ದು**' ಎಂದು ಅರ್ಥವಾಗುವುದಿಲ್ಲವೆ? ಹೀಗೆ ಅರ್ಥಮಾಡಲು ಸಾಧ್ಯವಾಗಿರುವಾಗ, 'ಕೃತಿ' ಕೃಷ್ಣದೇವರಾಯನ ಸಮಕಾಲೀನ ಎಂದೂ ಹೇಳಬಹುದಲ್ಲವೆ? ಮುಕ್ಕುತಿಮ್ಮಯ್ಯ ಮೊದಲಾದವರು ರಾಯನ ಹಾಗೂ ರಾಜ್ಯದ ವಿದ್ಯಮಾನಗಳನ್ನು ಬಲ್ಲವರಾಗಿದ್ದರು. ಅವರು ತಿಳಿಸಿದ ವಿಷಯ ಬೇರೆ ಯವರು ಬರೆದುಕೊಂಡು. ಆ ಲಿಖಿತಗ್ರಂಥದ ನಕಲುಗಳ ನಕಲು ಕನ್ನಡದ ಹಸ್ತಪ್ರತಿ. ಕೃತಿ 16ನೆಯ ಶತಕದ್ದು. ದೊರೆತ ಹಸ್ತಪ್ರತಿ ಬಹುಶಃ 17-18 ನೆಯ ಶತಕದ್ದು ಎಂದು ನಾವು ಅಭಿಪ್ರಾಯಪಟ್ಟಿದ್ದೇವೆ. ಕನ್ನಡ ಗ್ರಂಥದ

ಮೂಲಕೃತಿ ಎನ್ನಲಾದ 'ರಾಯವಾಚಕಮು' ಗ್ರಂಥದ ಕಾಲ 16ನೆಯ ಶತಕ ಎಂದು ಡಾ॥ ಆರ್ವಿಯಸ್‌ರವರೇ ಅಭಿಪ್ರಾಯಪಟ್ಟಿದ್ದಾರೆ. ಅದರ ಅನುವಾದ ಆಗಿರಬಹುದಾದ ಕನ್ನಡ ಕೃತಿಯ ಕಾಲವೂ ಅದೇ ಎಂದು ಸ್ಥಿರಪಡುತ್ತದೆ. 'ಸಮಕಾಲೀನ' ಎನ್ನುವುದರ ಅರ್ಥವಿವರಣೆಯನ್ನು ಈ ಮೊದಲೇ ಹೇಳಿದ್ದಾಗಿದೆ.

'ಶ್ರೀಕೃಷ್ಣದೇವರಾಯ' ಪುಸ್ತಕದ 8ನೆಯ ಪುಟದಲ್ಲಿ ಅಚ್ಚುಮಾಡಿರುವ ತೆಲುಗು ಪದ್ಯವನ್ನು ಕುರಿತು ಅಡಿಟಿಪ್ಪಣಿಯಲ್ಲಿ 'ದೋಷಪೂರ್ಣ' ಎಂದು ಹೇಳಿರುವುದು 'ಆರ್ವಿಯಸ್' ಅವರಿಗೆ ಸೋಜಿಗವಾಗಿ ಕಂಡಿದೆ. ನಮಗೆ ದೊರೆತದ್ದು ಏಕೈಕ ಹಸ್ತಪ್ರತಿ. ತೆಲುಗು ಮೂಲಪಾಠ, ಅಥವಾ ಪಾಠಾಂತರ, ದೊರೆಯದೆ ಹೋದಾಗ ಛಂದೋದೋಷವೂ ಭಾಷಾದೋಷವೂ ಇರುವ ಪದ್ಯವನ್ನು 'ದೋಷಪೂರ್ಣ' ಎನ್ನದೆ ಇನ್ನು ಏನೆಂದು ಹೇಳಬೇಕು ? 51ನೆಯ ಪುಟದಲ್ಲಿ ಕೊಟ್ಟಿರುವ ಸಂಸ್ಕೃತ ಶ್ಲೋಕವನ್ನು ಯಥಾಮತಿಯಾಗಿ ಪರಿಷ್ಕರಿಸಿದೆ. 'ರಾಯವಾಚಕಮು' ಗ್ರಂಥಪ್ರತಿ ನಮಗೆ ಉಪಲಬ್ಧವಾಗಿದ್ದಿದ್ದರೆ ತೆಲುಗು ಪದ್ಯದ ಸರಿಯಾದ ಪಾಠವನ್ನು ಕೊಡಲು ಕಷ್ಟಪಡಬೇಕಾಗಿಯೇ ಇರಲಿಲ್ಲ. 'ರಾಯವಾಚಕಮು' ತೆಲುಗು ಗ್ರಂಥದ ನೆರವು ಇಲ್ಲದೆ ಕನ್ನಡ ಕೃತಿಯಲ್ಲಿ ಉದ್ಧೃತವಾಗಿರುವ ತೆಲುಗುಪದ್ಯದ ಪುನಾರಚನೆ ತೆಲುಗು ವಿದ್ವಾಂಸರಿಗೂ ಕಷ್ಟಸಾಧ್ಯ. ತೆಲುಗುಪದ್ಯರಚನೆಯ ಅಭ್ಯಾಸವಿಲ್ಲದ ಪ್ರಧಾನ ಸಂಪಾದಕ ಆ ಸಾಹಸಕ್ಕೆ ಕೈಹಾಕಲಿಲ್ಲ.

" 'ದಿನಚರಿ'ಯ ಪ್ರಸ್ತಾವನೆಯಲ್ಲಿ (ಪು. xvi) ಪ್ರಧಾನ ಸಂಪಾದಕರು 'ಓರುಗಲ್ಲು (ಒರಿಸ್ಸಾದ)' ಎಂದು ಬರೆದಿರುವುದು ಇನ್ನೂ ಸೋಜಿಗದ ಸಂಗತಿ" ಎಂದು ಲೇಖಕರು ಪ್ರಸ್ತಾವಿಸಿದ್ದಾರಷ್ಟೆ. 'ಕಟಕದ (ಒರಿಸ್ಸಾದ) ಗಜಪತಿ ಪ್ರತಾಪರುದ್ರದೇವ' ಎಂದು ಹೇಳಬೇಕಾಗಿತ್ತು. ಓರುಂಗಲ್ಲಿನ ಪ್ರತಾಪರುದ್ರನ ಹೆಸರು ಗ್ರಂಥದಲ್ಲಿ (ಪು. 29) ಅನೇಕ ಸಲ ಉಕ್ತವಾಗಿದ್ದು ಕಟಕದ (ಈಗಿನ Cuttack) ಗಜಪತಿಯ ಹೆಸರೂ ಪ್ರತಾಪರುದ್ರ ಆದ್ದರಿಂದ ಇಬ್ಬರಿಗೂ ಅಭೇದಕಲ್ಪನೆಯ ಭ್ರಮಾಪ್ರಮಾದ ಉಂಟಾಗಿದೆ. ಇದು ಅಗತ್ಯವಾಗಿ ತಿದ್ದಿಕೊಳ್ಳಬೇಕಾದ ಅಂಶ."

—ಎಂ.ವಿ.ಸೀ.

'ಶ್ರೀಕೃಷ್ಣದೇವರಾಯನ ದಿನಚರಿ'ಯ ಪ್ರಧಾನ ಸಂಪಾದಕರು ನೀಡಿರುವ ವಿವರಣೆಯನ್ನು ಪ್ರಕಟಿಸುತ್ತ, 'ರಾಯವಾಚಕಮು' ಗ್ರಂಥವನ್ನು ದೊರಕಿಸಿಕೊಂಡು ಗ್ರಂಥದ ಲೋಪದೋಷಗಳು ಯಾವುವಿದ್ದರೂ ಅವುಗಳನ್ನು ಮರುಮುದ್ರಣದಲ್ಲಿ ಸಂಪಾದಕರು ಸರಿಪಡಿಸಬಹುದಾಗಿದೆ. 'ರಾಯವಾಚಕಮು' ಕೃತಿಯ ಕಡೆಗೆ ನಮ್ಮ ಗಮನ ಸೆಳೆದು ಡಾ॥ ಆರ್ವಿಯಸ್ ಉಪಕರಿಸಿದ್ದಾರೆ. —ಸಂ.

# ಕನ್ನಡ ಲಿಪಿಯ ವಿಕಾಸ

—ಡಾ॥ ಎನ್. ಅನಂತರಂಗಾಚಾರ್

**ದಾಕ್ಷಿಣಾತ್ಯ ಲಿಪಿಗಳ ವ್ಯಾಸಂಗ :**—ಭಾರತೀಯ ಲಿಪಿಯ ವಿಕಾಸದ ವಿಷಯಕವಾದ ವ್ಯಾಸಂಗವು ಈಗ ಎರಡು ಶತಮಾನಗಳಿಂದ ಪ್ರಾರಂಭವಾಗಿದೆ. 1784ರಲ್ಲಿ ಕಲ್ಕತ್ತದಲ್ಲಿ ವಿಲಿಯಂ ಜೋನ್ಸನು ಏಷ್ಯಾಟಿಕ್ ಸೊಸೈಟಿಯನ್ನು ಪ್ರಾರಂಭಿಸಿದಾಗಿನಿಂದ ಇದರ ಸಂಶೋಧನೆಯು ಪ್ರಾರಂಭವಾಯಿತೆಂದು ಹೇಳಬಹುದು. ಕಳೆದ ಶತಮಾನದ ಒಂದೆರಡನೆಯ ದಶಕಗಳಲ್ಲಿ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯ ಸರ್ವೆಯರ್ ಜನರಲ್ಲಾಗಿದ್ದ ಕರ್ನಲ್ ಮೆಕೆನ್ಸಿಯು ಈ ಕೆಲಸಕ್ಕೆ ಕೈಹಾಕುವವರೆಗೆ ಹೆಚ್ಚು ಕೆಲಸ ನಡೆಯಲಿಲ್ಲ. 1828ರಲ್ಲಿ ಬಾಬಿಂಗ್‌ಟನ್ ಎಂಬುವನು ಮಹಾಬಲಿಪುರದ ಸಂಸ್ಕೃತ ಶಾಸನಗಳ ಲಿಪಿಯನ್ನು ಅಭ್ಯಾಸ ಮಾಡಿ ಒಂದು ಪಟ್ಟಿಯನ್ನು ತಯಾರಿಸಿದನು. 1833ರಲ್ಲಿ ಸರ್ ವಾಲ್ಟರ್ ಇಲಿಯಟ್ಟನು ಕನ್ನಡ ಲಿಪಿಯ ವಿಷಯವಾಗಿ ಒಂದು ವಿಸ್ತಾರವಾದ ಪಟ್ಟಿಯನ್ನು ಸಿದ್ಧಪಡಿಸಿದ್ದನು. ನಾಲ್ಕುವರ್ಷದ ತರುವಾಯ ಕ್ಯಾಪ್ಟನ್ ಹೆಚ್. ಹಾರ್ಕಿಗೆಸ್ ಎಂಬುವನು 'ಭಾರತದ ದಕ್ಷಿಣ ಪರ್ಯಾಯ ದ್ವೀಪದ ಪ್ರಾಚೀನ ಮತ್ತು ಆಧುನಿಕ ಜನಪ್ರಿಯ ಭಾಷೆಗಳ ಲಿಪಿಗಳು' (Ancient and Modern Alphabets of the popular languages of the Southern Peninsula of India) ಎಂಬ ಗ್ರಂಥವನ್ನು ರಚಿಸಿದನು. ಆದರೆ ಈ ಕ್ಷೇತ್ರದಲ್ಲಿ ಶಾಸ್ತ್ರೀಯವಾದ ಕೆಲಸ ನಡೆದುದು 1874ರಲ್ಲಿ ಎ.ಸಿ. ಬರ್ನೆಲ್ ತನ್ನ 'ದಕ್ಷಿಣ ಇಂಡಿಯಾದ ಲಿಪಿಶಾಸ್ತ್ರದ ಮೂಲತತ್ತ್ವಗಳು' (Elements of South Indian paleography) ಎಂಬ ಗ್ರಂಥವನ್ನು ರಚಿಸಿದಾಗಲೇ. ಇದು 4 ರಿಂದ 14ನೆಯ ಶತಮಾನದವರೆಗಿನ ಲಿಪಿ ವಿಕಾಸವನ್ನು ಕುರಿತುದಾಗಿದೆ. ಇದು ಭಾರತೀಯ ಶಾಸನಗಳನ್ನು ಕೈಬರಹದ ಪುಸ್ತಕಗಳನ್ನು ಅಭ್ಯಾಸ ಮಾಡಲು ಒಂದು ಪ್ರವೇಶಿಕೆಯಾಯಿತು. 1896ರಲ್ಲಿ ಜಾನ್ ಜಾರ್ಜ್ ಬ್ಯೂಲರ್ ಭಾರತೀಯ ಲಿಪಿಶಾಸ್ತ್ರದ ಮೇಲೆ ತನ್ನ ಉದ್ದಾಮ ಉದ್ಗ್ರಂಥವಾದ '**ಇಂಡಿಷ್ ಪೇಲಿಯೋಗ್ರಫಿ**' ಎಂಬುದನ್ನು ಜರ್ಮನ್ ಭಾಷೆಯಲ್ಲಿ ಪ್ರಕಟಿಸಿದನು. ಅದನ್ನು ರೆ॥ ಜೆ. ಎಫ್. ಫ್ಲೀಟ್ ಇಂಡಿಯನ್ ಆಂಟಿಕ್ವೆರಿಯ 33ನೆಯ ಸಂಪುಟದಲ್ಲಿ ಇಂಗ್ಲೀಷಿಗೆ ಭಾಷಾಂತರಿಸಿ ಪ್ರಕಟಿಸಿದನು. ಇದರಲ್ಲಿ ಸೂಕ್ತ ಉದಾಹರಣೆಯ ಪಟಗಳು ವಿಶೇಷವಾಗಿವೆ. ಅದರಲ್ಲಿ ದಕ್ಷಿಣ ಭಾರತದ ಲಿಪಿಗಳ ವಿಷಯವಾಗಿ ಸಾಕಷ್ಟು ವಿಚಾರ ಮಾಡಿದ್ದಾನೆ. ಔತ್ತರೇಯ ಮತ್ತು ದಾಕ್ಷಿಣಾತ್ಯ ಲಿಪಿಗಳ ವ್ಯತ್ಯಾಸವನ್ನು ತಿಳಿಸಿದ್ದಾನೆ. 1918ರಲ್ಲಿ ಜಿ. ಹೆಚ್. ಓಝನೆಂಬುವನೂ ಹಿಂದಿಯಲ್ಲಿ 'ಪ್ರಾಚೀನ ಲಿಪಿಮಾಲಾ' ಎಂಬ ಪ್ರಬಂಧವನ್ನು ಸಚಿತ್ರವಾಗಿ ಪ್ರಕಟಿಸಿದನು. ಅದರಲ್ಲಿ ದಾಕ್ಷಿಣಾತ್ಯ ಲಿಪಿಗಳ

ವಿಕಾಸ ಸಂಗ್ರಹವಾಗಿ ನಿರೂಪಿತವಾಗಿದೆ. 1963ರಲ್ಲಿ ಅಹಮದ್ ಹುಸೇನ್ ದಾನಿ ಎಂಬುವನು ತನ್ನ 'ಭಾರತದ ಲಿಪಿ ಶಾಸ್ತ್ರ'ವೆಂಬ ಗ್ರಂಥದಲ್ಲಿ ವಿಸ್ತಾರವಾಗಿ ವಿಷಯ ವಿವರಣೆ ಮಾಡಿದ್ದಾನೆ. ಅದರಲ್ಲಿಯೂ ದಾಕ್ಷಿಣಾತ್ಯ ಲಿಪಿ ಶಾಸ್ತ್ರದ ವಿವರಣೆಯಿದೆ. ಹಾಗೆಯೆ ಬಹಳ ಉಪಯುಕ್ತವಾದ, ರಾಜಬಲಿಪಾಂಡೆಯವರು 1952ರಲ್ಲಿ ಪ್ರಕಟಿಸಿದ, ಭಾರತೀಯ ಲಿಪಿಶಾಸ್ತ್ರದಲ್ಲಿಯೂ ಈ ವಿಷಯದ ಪ್ರಸ್ತಾಪವಿಲ್ಲ. 1914 ರಲ್ಲಿ ಟಿ. ಎ. ಗೋಪಿನಾಥರಾಯರು ತಮ್ಮ ತಿರುವಾಂಕೂರು ಪ್ರಾಚ್ಯಸಂಶೋಧನ ಮಾಲೆಯಲ್ಲಿ ದಾಕ್ಷಿಣಾತ್ಯ ಲಿಪಿಗಳ ವಿಕಾಸವನ್ನು ಸಂಗ್ರಹವಾಗಿ ಪರಿಶೀಲಿಸಿದ್ದಾರೆ. 1954ರಲ್ಲಿ ತಮ್ಮ Indian Epigraphy & South Indian Scripts ಎಂಬ ಗ್ರಂಥದಲ್ಲಿ ಶಿವರಾಮಮೂರ್ತಿಯವರು ದಾಕ್ಷಿಣಾತ್ಯ ಲಿಪಿಗಳ ವಿಚಾರವನ್ನು ಅಕ್ಷರಶಃ ವಿಚಾರ ಮಾಡಿದ್ದಾರೆ. 1956ರಲ್ಲಿ ಪ್ರಕಟವಾದ ಕನ್ನಯ್ಯನ 'ದಾಕ್ಷಿಣಾತ್ಯ ಲಿಪಿಗಳು' ಎಂಬುದು ಭಾರತೀಯ ಲಿಪಿಗಳ ವಿಷಯಕವಾದ ಮತ್ತೊಂದು ಪುಸ್ತಕ. 1974ರಲ್ಲಿ ಪ್ರಕಟವಾದ ಟಿ. ವಿ. ಮಹಾಲಿಂಗಂ ಅವರ 'Early South Indian Paleography' ಎಂಬುದು ಶಾಸ್ತ್ರೀಯವಾದ ಅಧಿಕೃತ ಗ್ರಂಥ.

ಕನ್ನಡ ಲಿಪಿ ಶಾಸ್ತ್ರ ಮತ್ತು ಶಾಸನ ವಿಷಯವಾಗಿ ಆರ್. ಎಸ್. ಪಂಚಮುಖಿ, ಪಿ. ಬಿ. ದೇಸಾಯಿ, ಎ. ಎಂ. ಅಣ್ಣಿಗೇರಿ, ಎನ್. ಅನಂತರಂಗಾಚಾರ್, ಎ. ವಿ. ನರಸಿಂಹಮೂರ್ತಿ, ಮಾಧವ ನಾ. ಕಟ್ಟಿ, ಮೊದಲಾದವರು ಕಿರುಹೊತ್ತಿಗೆಗಳನ್ನು ಪ್ರಕಟಿಸಿದ್ದಾರೆ. ಆದರೂ ಕನ್ನಡ ಲಿಪಿ ಶಾಸ್ತ್ರದ ವಿಷಯವಾಗಿ ಇನ್ನೂ ಸಮಗ್ರವಾದ ವಿಮರ್ಶಕ ಗ್ರಂಥದ ಪ್ರಕಟನೆ ಅವಶ್ಯಕವಾಗಿದೆ. ಪ್ರತ್ಯೇಕ ಅಕ್ಷರಗಳ, ಕಾಗುಣಿತಗಳ, ಸಂಯುಕ್ತಾಕ್ಷರಗಳ, ಸಂಖ್ಯೆಗಳ ವಿವರವಾದ ವಿಕಾಸವನ್ನೂ ಬೇರೆ ಬೇರೆ ಪ್ರಾಂತದ ಕಾಲದ ಅನೇಕ ಶಾಸನಗಳ ಮತ್ತು ಕೈಬರಹದ ಪುಸ್ತಕಗಳ ಅಭ್ಯಾಸದ ಮೇಲೆ ಪ್ರತ್ಯೇಕ ಪಟಗಳ ಸಹಾಯದಿಂದ ಅಕ್ಷರಗಳ ಬೆಳವಣಿಗೆಯ ಮೈಲಿಗಲ್ಲುಗಳ ವಿಶೇಷ ಲಕ್ಷಣಗಳನ್ನೂ ನಿಷ್ಕೃಷ್ಟವಾದ ರೀತಿಯಲ್ಲಿ; ಕಾಲನಿರ್ಣಯ ಮಾಡಲು ಸಹಾಯಕ ವಾಗುವ ರೀತಿಯಲ್ಲಿ ಪ್ರಬಂಧವೊಂದು ವಿಶೇಷ ಪರಿಶ್ರಮದಿಂದ ಸಿದ್ಧವಾಗಬೇಕಾಗಿದೆ.

## ಲಿಪಿಯ ಉಗಮ, ವಿಕಾಸ

ಲಿಪಿಗಳೂ ಇತರ ಕಲೆಗಳಂತೆ ಮನುಷ್ಯನ ಮನೋಭಿಪ್ರಾಯವನ್ನು ತಿಳಿಸುವ ಒಂದು ಸಾಧನ. ಆದಿಮಾನವನ ಕಾಲದಿಂದ ನಾಗರಿಕಮಾನವನ ಕಾಲದವರೆಗೆ ಅವು ವಿಶೇಷ ರೀತಿಯಲ್ಲಿ ಬೆಳೆದು ಬಂದಿದೆ. ಭಾವಜೀವಿಯಾದ ಮನುಷ್ಯನು ತನಗೆ ಉಂಟಾದ ಸುಖ ಸಂತೋಷಗಳನ್ನು ಆಸೆನಿರಾಸೆಗಳನ್ನು ತಾನೇ ಪುನಃ ಸವಿಯು ವುದಕ್ಕೂ ಇತರರಿಗೆ ತಿಳಿಯಪಡಿಸುವುದಕ್ಕೂ ಆಶಿಸುತ್ತಾನೆ. ಅವನ್ನು ಶಾಶ್ವತ ಗೊಳಿಸುವುದಕ್ಕೆ ಇಚ್ಛಿಸುತ್ತಾನೆ. ಇದೇ ಲಿಪಿಯ ಮೂಲ. ಅದನ್ನು ವಿವಿಧರೀತಿ ಗಳಲ್ಲಿ ಬೆಳಸಿಕೊಂಡು ಬಂದಿದ್ದಾನೆ. ಸಾವಿರಾರು ವರ್ಷಗಳ ಹಿಂದೆ ಪ್ರಾಚೀನ ಮಾನವ

ಬರೆದು ಕೊರೆದ ಚಿತ್ರಗಳು ಗುಹೆಗಳ ಗೋಡೆಗಳ ಮೇಲೆ ನಮಗೆ ದೊರೆತಿವೆ. ಅವು ಅವನ ಅಭಿಪ್ರಾಯಸೂಚಕವಾದ ಸಂಕೇತಗಳು. ಇಂತಹವು ಬಹುಮಟ್ಟಿಗೆ ಪ್ರಾಣಿಗಳ ಮತ್ತು ಮನುಷ್ಯನ ಚಿತ್ರಗಳು. ಇಂತಹ ಚಿತ್ರಗಳು ಉತ್ತರ ಅಮೇರಿಕಾದ ಬೆಟ್ಟಗುಡ್ಡಗಳಲ್ಲಿ, ದಕ್ಷಿಣ ಆಫ್ರಿಕದಲ್ಲಿ, ದಕ್ಷಿಣ ಯೂರೋಪಿನಲ್ಲಿ, ಪ್ರಪಂಚದ ಇತರ ಅನೇಕ ಕಡೆಗಳಲ್ಲಿ ಸಿಕ್ಕಿವೆ. ಈ ಚಿತ್ರಗಳಲ್ಲಿ ಹಲವರು ಕೇವಲ ಚಿತ್ರಗಳನ್ನು ಬರೆಯಬೇಕೆಂಬ ಕಲಾಭಿರುಚಿಯಿಂದ ಪ್ರೇರಿತವಾಗಿ ಬರೆದಿರಬಹುದು. ಇನ್ನೂ ಕೆಲವನ್ನು ತಮ್ಮ ಅಭಿಪ್ರಾಯಗಳನ್ನೂ ತಿಳಿಸಲೋ, ಅಥವಾ ನಡೆದ ಘಟನೆಯೊಂದನ್ನು ಬಹುಕಾಲದವರೆಗೆ ಹಿಡಿದಿಡಲೋ ಬರೆದಿರಬೇಕು. ಹೀಗೆ ಚಿತ್ರಗಳ ಮೂಲಕ ಅಭಿಪ್ರಾಯಗಳನ್ನು ನಿರೂಪಿಸುವ ಘಟ್ಟವೇ ಬರಹದ ಇತಿಹಾಸದಲ್ಲಿ ಮೊದಲನೆಯ ಘಟ್ಟ. ಇದನ್ನು ಚಿತ್ರಲೇಖನ ಎಂದು ಕರೆಯಬಹುದು. ಉದಾಹರಣೆಗೆ, ಒಂದು ವೃತ್ತವು ಸೂರ್ಯನನ್ನು ಸೂಚಿಸಬಹುದು. ಮನುಷ್ಯನ ಚಿತ್ರವು ಮನುಷ್ಯನನ್ನು ಮರದ ಚಿತ್ರವು ಮರವನ್ನು ಸೂಚಿಸಬಹುದು. ಇಂತಹ ಕೆಲವು ಚಿತ್ರಗಳನ್ನು ಒಂದು ಕ್ರಮದಲ್ಲಿ ಬರೆದು ಕೆಲವು ಅಭಿಪ್ರಾಯಗಳನ್ನು ಚಿತ್ರಿಸಬಹುದು. ಇಲ್ಲಿ ಚಿತ್ರಕ್ಕೂ, ವಸ್ತುವಿಗೂ ನೇರವಾದ ಸಂಬಂಧವಿರುತ್ತದೆ. ಭಾಷೆಗೂ ಚಿತ್ರಕ್ಕೂ ಸಂಬಂಧವೇ ಇರುವುದಿಲ್ಲ. ಇಂತಹ ಚಿತ್ರಲೇಖನಗಳು ಅತ್ಯಂತ ಪ್ರಾಚೀನಕಾಲದ ಈಜಿಪ್ಟ್, ಮೆಸೊಪೊಟೇಮಿಯ, ಸ್ಪೆಯಿನ್, ದಕ್ಷಿಣ ಫ್ರಾನ್ಸ್, ಇತ್ಯಾದಿ ದೇಶಗಳಲ್ಲಿ ಸಿಕ್ಕುತ್ತವೆ. ಆಧುನಿಕ ಕಾಲದಲ್ಲಿ ದಕ್ಷಿಣ ಆಫ್ರಿಕದ, ಉತ್ತರ ಅಮೆರಿಕಾದ ಮತ್ತು ಆಸ್ಟ್ರೇಲಿಯದ ಜನಾಂಗಗಳೂ ಚಿತ್ರಲೇಖನಗಳನ್ನು ಬರೆದಿದ್ದಾರೆ. ಚಿತ್ರಲೇಖನವು ಕೇವಲ ಚಿತ್ರವಲ್ಲ. ಇಲ್ಲಿ ಚಿತ್ರಕ್ಕಿಂತ ಅಭಿಪ್ರಾಯ ನಿವೇದನೆಗ ಹೆಚ್ಚು ಪ್ರಾಮುಖ್ಯ.

ಇತಿಹಾಸ ಪೂರ್ವಕಾಲದ ಈಜಿಪ್ಟ್ ಮತ್ತು ಪ್ರಾಚೀನ ಗ್ರೀಸ್ ದೇಶಗಳಲ್ಲಿ ಬರಹ ಮತ್ತು ಚಿತ್ರಣಗಳೆರಡೂ ಒಂದೇ ಆಗಿದ್ದುವು. ಸಂಸ್ಕೃತದಲ್ಲಿಯೂ 'ಲಿಪ್' ಎಂದರೆ ಬರೆ ಅಥವಾ ಚಿತ್ರವನ್ನು ಕೊರೆ ಎಂಬ ಅರ್ಥಗಳಿವೆ. ದ್ರಾವಿಡ ಭಾಷೆಗಳಲ್ಲಿಯೂ ವರೈ (ಬರೆ) ಧಾತುವಿಗೆ ಇದೇ ಅರ್ಥಗಳಿವೆ.

ಚಿತ್ರಲೇಖನದ ಮುಂದಿನ ವಿಕಾಸ ಭಾವ ಲೇಖನ. ಇಲ್ಲಿ ಚಿತ್ರಗಳು ವಸ್ತುಗಳನ್ನು ಸೂಚಿಸುವುದಕ್ಕಿಂತ ಹೆಚ್ಚಾಗಿ ಅವುಗಳಿಗೆ ಸಂಬಂಧಿಸಿದ ಅಥವಾ ಆ ವಸ್ತುಗಳಿಂದ ಸೂಚಿತವಾಗುವ ಭಾವಗಳನ್ನು ಸೂಚಿಸುತ್ತವೆ. ಉದಾಹರಣೆಗೆ ಒಂದು ವೃತ್ತವು ಸೂರ್ಯನನ್ನು ಮಾತ್ರವೇ ಅಲ್ಲದೆ ಬೆಳಕು, ಸೂರ್ಯ, ದೇವತೆ ಅಥವಾ ದಿನವನ್ನು ಸೂಚಿಸಬಹುದು. ಹೋಗು ಎಂಬ ಭಾವವನ್ನು ಕಾಲನ್ನು ಸೂಚಿಸುವ ಎರಡು ರೇಖೆಗಳಿಂದ ಸೂಚಿಸಬಹುದು. ಪಶ್ಚಿಮ ಆಫ್ರಿಕದ ಜನಗಳ ಚಿತ್ರಗಳಲ್ಲಿ ಒಂದು ಸೂಜಿ, ಒಂದು ಬಟ್ಟೆಯ ತುಂಡುಗಳ ಚಿತ್ರವು ಸೂಜಿಯು ಬಟ್ಟೆಯನ್ನು ಹೊಲಿಯುತ್ತದೆ ಎಂಬುದನ್ನು ಸೂಚಿಸುವುದಲ್ಲದೆ ಸಣ್ಣವಸ್ತುಗಳಿಂದ ದೊಡ್ಡಕಾರ್ಯ

ವಾಗುತ್ತದೆ ಎಂಬ ಗಾದೆಯನ್ನು ಸೂಚಿಸಬಹುದು. ಚೀನಾ ದೇಶದ ಬರಹಗಳಲ್ಲಿಯೂ ಭಾವಲೇಖನಗಳನ್ನು ಗುರುತಿಸಬಹುದು.

ಭಾವಲೇಖನವು ಚಿತ್ರಲೇಖನದ ಮುಂದಿನ ಹೆಜ್ಜೆಯಾದರೂ ಇಲ್ಲಿಯೂ ಆ ಚಿತ್ರಗಳಿಗೂ ಅವು ಸೂಚಿಸುವ ವಸ್ತುಗಳಿಗೂ ಅಥವಾ ಭಾವಗಳಿಗೂ, ಆ ಭಾಷೆಯಲ್ಲಿರುವ ಪದಗಳಿಗೂ ಇರುವ ಸಂಬಂಧವು ಕಲ್ಪನೆಯಾಗಿಲ್ಲ. ಚಿತ್ರಗಳು ಕ್ರಮೇಣ ಸಂಪ್ರದಾಯಬದ್ಧವಾದುವು. ಅನೇಕ ಮಾರ್ಪಾಟುಗಳನ್ನು ಪಡೆದವು.

ಲಿಪಿಯ ಇತಿಹಾಸದಲ್ಲಿ ಮುಂದಿನದು ಧ್ವನಿಲೇಖನ. ಇಲ್ಲಿ ಚಿಹ್ನೆಗಳಿಗೂ ವಸ್ತುಗಳಿಗೂ ಇದ್ದ ನೇರವಾದ ಸಂಬಂಧವು ಕಡಿದು ಹೋಗಿ ಚಿಹ್ನೆಗಳಿಗೂ ವಸ್ತುಗಳಿಗೆ ಭಾಷೆಯಲ್ಲಿದ್ದ ಹೆಸರುಗಳಿಗೂ ಅಥವಾ ಪದಗಳಿಗೂ ನೇರವಾದ ಸಂಬಂಧವು ಸ್ಥಾಪಿತವಾಯಿತು. ಮುಖದ ಚಿತ್ರವು ನೇರವಾಗಿ ಮುಖವನ್ನು ಸೂಚಿಸುವುದಕ್ಕೆ ಬದಲಾಗಿ ಮುಖಕ್ಕೆ ಭಾಷೆಯಲ್ಲಿದ್ದ ಪದದ ಸಂಕೇತವಾಗಿ ಪರಿಣಮಿಸಿತು. ಇಲ್ಲಿ ಒಂದು ಚಿತ್ರವು ಆ ವಸ್ತುವನ್ನು ಸೂಚಿಸುವುದಿಲ್ಲ. ಆ ವಸ್ತುವಿಗೆ ಭಾಷೆಯಲ್ಲಿರುವ ಪದವನ್ನು ಸೂಚಿಸುತ್ತದೆ. ಉದಾಹರಣೆಗೆ I saw ಎಂಬುದನ್ನು ಕಣ್ಣಿನ ಚಿತ್ರ + ಗರಗಸದ ಚಿತ್ರಗಳ ಮೂಲಕ ಬರೆಯಬಹುದು. ಆ ಚಮತ್ಕಾರದ ಬರವಣಿಗೆಯಲ್ಲಿ ಚಿತ್ರಕ್ಕೂ ವಸ್ತುವಿಗೆ ಇರುವ ಹೆಸರಿಗೂ ಸಂಬಂಧವುಂಟು. ಚಿತ್ರಗಳು ಈ ಹಂತದಲ್ಲಿ ಧ್ವನಿಗಳನ್ನು ಸೂಚಿಸಲಾರಂಭಿಸಿದುವು. ಒಂದೊಂದು ಚಿತ್ರವೂ ಒಂದೊಂದು ವಸ್ತುವಿನ ಪದಕ್ಕೆ ಸಂಕೇತವಾಗಿ ಪರಿಣಮಿಸಿತು. ಈಗಿನ ಚೈನೀಸ್ ಲೇಖನದಲ್ಲಿ ಈ ಘಟ್ಟದ ಕುರುಹುಗಳನ್ನು ಕಾಣಬಹುದು. ಇಲ್ಲಿ ಒಂದೊಂದು ಧ್ವನಿಗೂ ಒಂದೊಂದು ಚಿಹ್ನೆಯಿಲ್ಲ. ಒಂದೊಂದು ಪದಕ್ಕೂ ಪ್ರತ್ಯೇಕ ಚಿಹ್ನೆಯುಂಟು. ಈ ವಿಧದ ಬರವಣಿಗೆಯನ್ನು ಪದಲೇಖನವೆಂದು ಕರೆಯಬಹುದು.

ಬಹು ಶ್ರಮ ಸಾಧ್ಯವಾದ ಈ ಪದಲೇಖನವೇ ಮುಂದೆ ಸರಳಗೊಂಡು ಲಿಪಿಗೆ ಎಡೆಮಾಡಿಕೊಟ್ಟಿತು. ಈ ಹೆಜ್ಜೆಯನ್ನು ಅಕ್ಷರ ಲೇಖನವೆಂದು ಕರೆಯಬಹುದು. ಅಕ್ಷರವೆಂದರೆ ಒಂದು ಸ್ವರ ಅಥವಾ ವ್ಯಂಜನಗಳ ಸಮೇತವಾದ ಒಂದು ಸ್ವರ. ಈ ಘಟ್ಟದಲ್ಲಿ ಒಂದು ಚಿಹ್ನೆಯು ಒಂದು ಸ್ವರಕ್ಕೆ ಅಥವಾ ವ್ಯಂಜನ ಸಮೇತವಾದ ಸ್ವರಕ್ಕೆ ಸಂಕೇತವಾಗಿ ಪರಿಣಮಿಸಿತು. ಈಜಿಪ್ಷಿಯನ್ ಭಾಷೆಯ 24 ಸ್ವರಗಳಿಗೂ ಪ್ರತ್ಯೇಕ ಒಂದು ಚಿಹ್ನೆ ಇರುತ್ತಿತ್ತು. ಅಷ್ಟು ಸಂಖ್ಯೆಯ ವ್ಯಂಜನಗಳಿಂದ ಆ ಭಾಷೆಯನ್ನು ಬರೆಯಬಹುದಾಗಿತ್ತು. ಸ್ವರಗಳನ್ನು ಬಿಟ್ಟು ಬರೆಯಲೂ ಸಾಧ್ಯವಿತ್ತು. ಆದುದರಿಂದಲೇ ಈಜಿಪ್ಷಿಯನ್ ಬರಹದಲ್ಲಿ ಚಿಹ್ನೆಗಳು ಸ್ವರಸಹಿತವಾದ ವ್ಯಂಜನಗಳನ್ನು ಸೂಚಿಸುತ್ತಿದ್ದವು.

ಅಕ್ಷರ ಲೇಖನದಿಂದ ಮುಂದೆ ವರ್ಣಮಾಲೆಯ ಕಡೆಗೆ ನಡೆದ ವಿಕಾಸದಲ್ಲಿ ಎರಡು ಘಟ್ಟಗಳನ್ನು ಕಾಣಬಹುದು. ಒಂದು ಪಶ್ಚಿಮ ಸೆಮೆಟಿಕ್ ಬರಹದ್ದು. ಮತ್ತೊಂದು ಗ್ರೀಕ್ ಬರಹದ್ದು. ಈಜಿಪ್ಷಿಯನ್ ಚಿಹ್ನೆಗಳನ್ನು ಅಂಗೀಕರಿಸಿದ

ಫಿನೀಷಿಯನ್ನರು ಅಲ್ಲಿಯ ಒಂದೊಂದು ಚಿಹ್ನೆಯೂ ಒಂದು ವ್ಯಂಜನಕ್ಕೆ ಮಾತ್ರ ಸಂಕೇತವಾಗಿರುವಂತೆ ಕಲ್ಪಿಸಿಕೊಂಡು ಹೆಚ್ಚಿನ ಚಿಹ್ನೆಗಳನ್ನು ತಿರಸ್ಕರಿಸಿದರು. ಪಶ್ಚಿಮ ಸೆಮೆಟಿಕ್ ಬರಹಗಳಲ್ಲಿ ಸ್ವರಗಳಿಗೆ ಚಿಹ್ನೆಗಳನ್ನು ಕಲ್ಪಿಸುವ ಅವಶ್ಯಕತೆ ಅವರಿಗೆ ಕಂಡುಬರಲಿಲ್ಲ. ಸ್ವರಗಳನ್ನು ಬರೆಯದೆ ಹಾಗೆಯೇ ಬಿಟ್ಟುಬಿಡುತ್ತಿದ್ದರು. ಈ ಈಜಿಪ್ಷಿಯನ್ ಬರಹವನ್ನು ತಾವು ಬರೆಯಲು ಬಳಸಿಕೊಂಡರು. ಫಿನಿಷಿಯನ್ ಬರಹದ ಕೆಲವು ಚಿಹ್ನೆಗಳು ಗ್ರೀಕ್ ಭಾಷೆಯಲ್ಲಿಲ್ಲದ ವ್ಯಂಜನಗಳಿಗೆ ಸಂಕೇತವಾಗಿದ್ದುವು. ಈ ಹೆಚ್ಚಿಗೆ ಉಳಿದ ಚಿಹ್ನೆಗಳನ್ನು, ಸ್ವರಗಳನ್ನು ಗ್ರೀಕರು ಬಳಸಲು ಪ್ರಾರಂಭಿಸಿದರು. ಅಂದರೆ ಗ್ರೀಕರ ಬರಹದಲ್ಲಿ ಸ್ವರವ್ಯಂಜನಗಳಿಗೆ ಪ್ರತ್ಯೇಕ ಚಿಹ್ನೆಗಳಲ್ಲದೆ ಎಲ್ಲ ಧ್ವನಿಗಳಿಗೂ ಪ್ರತ್ಯೇಕ ಚಿಹ್ನೆಗಳು ಕಲ್ಪಿತವಾದುವು. ಇದೇ ನಿಜವಾದ ವರ್ಣಮಾಲಾತ್ಮಕ ಲೇಖನ. ಹೀಗೆ ಲಿಪಿಯು ಚಿತ್ರಗಳಿಂದ ಆರಂಭವಾಗಿ ಬೇರೆ ಬೇರೆ ಘಟ್ಟಗಳಲ್ಲಿ ವಿಕಾಸ ಹೊಂದಿ ಈಗಿನ ರೂಪವನ್ನು ಮುಟ್ಟಿದೆ.

ಕನ್ನಡ ಲಿಪಿಯು ಬ್ರಾಹ್ಮೀಲಿಪಿಯಿಂದ ನಿಷ್ಪನ್ನವಾಗಿದೆ. ಬ್ರಾಹ್ಮೀಲಿಪಿಯಲ್ಲಿ ಒಂದೊಂದು ಧ್ವನಿಗೂ ಪ್ರತ್ಯೇಕ ಚಿಹ್ನೆಯುಂಟು. ಈ ಬ್ರಾಹ್ಮೀಲಿಪಿಯು ದೇಶೀಯ ಜನ್ಯವೇ ಅಥವಾ ಅನ್ಯದೇಶೀಯವೇ ಎಂಬ ವಿಷಯದಲ್ಲಿ ವಿಶೇಷ ಭಿನ್ನಾಭಿಪ್ರಾಯಗಳಿವೆ.

ಪ್ರೊ॥ ಕಾಫ್ (1821) ಡಾಕ್ಟರ್ ಲೆಪ್ಸಿಯಸ್ (1834) ಬೆನಫಿ ಬ್ಯೂಲರ್, ಬರ್ನಲ್, ವೀಟರ್, ಡೀಕ್, ಐಸಾಕ್ ಟೇಲರ್, ಹಾಲೆವಿ, ಮ್ಯಾಕ್ಸ್‌ಮುಲರ್ ಮುಂತಾದವರು ಭರತಖಂಡಕ್ಕೆ ಲಿಪಿಯು ಅನ್ಯದೇಶದಿಂದ ಬಂದಿತೆಂದು ನಿಷ್ಕರ್ಷಿಸುತ್ತಾರೆ. ಆದರೆ ಕನಿಂಗ್ ಹ್ಯಾಂ, ಲಾಸ್ಸೆ, ಡಾಸನ್, ಥಾಮಸ್ ಮೊದಲಾದ ಕೆಲವರು ಭಾರತೀಯ ಲಿಪಿಯು ಭರತಖಂಡದವರಿಂದಲೇ ಕಲ್ಪಿತವಾದುದೆಂದು ತಿಳಿಸಿದ್ದಾರೆ.

ಪ್ರಖ್ಯಾತನಾದ ಪಂಡಿತ ವೈಕೌಂಟ್ ಇ. ಡಿ. ರೂಜ್ ಎಂಬಾತನು ಫಿನಿಷಿಯನ್ ವರ್ಣಮಾಲೆಯು ಸುಮಾರು ಕ್ರಿ.ಪೂ. 19ನೆಯ ಶತಮಾನದಲ್ಲಿ ಈಜಿಪ್ಟ್ ದೇಶದವನ್ನು ಚಿಹ್ನೆಗಳಿಂದ ಹುಟ್ಟಿತೆಂದು ತೋರಿಸಿದ್ದಾನೆ. ಡೀಕ್ ಮತ್ತು ಸೈಸ್ ಎಂಬುವರು ಈ ವಿಷಯವನ್ನು ಅನುಮೋದಿಸಿ ಭಾರತೀಯ ವರ್ಣಮಾಲೆಯು ಫಿನಿಷಿಯನ್ ವರ್ಣಮಾಲೆಯಿಂದ ಹುಟ್ಟಿತೆಂದು ಹೇಳುತ್ತಾರೆ. ಕ್ರಿ.ಪೂ. 7ನೆಯ ಶತಮಾನದಲ್ಲಿ ಫಿನಿಷಿಯನ್ನರು ಭರತಖಂಡದಲ್ಲಿ ವಾಣಿಜ್ಯ ಸಂಬಂಧವನ್ನು ಪಡೆದಿದ್ದರು. ಇದರಿಂದ ಭರತಖಂಡದಲ್ಲಿ ಲಿಪಿಯ ಆರಂಭವು ಕ್ರಿ.ಪೂ. 7ನೆಯ ಶತಮಾನಕ್ಕಿಂತ ಹಿಂದಕ್ಕೆ ಇರಲಾರದೆಂದು ವಾದ ಮಾಡುತ್ತಾರೆ.

ಮತ್ತೆ ಕೆಲವರು ಫಿನಿಷಿಯನ್ ವರ್ಣಮಾಲೆಯಿಂದ ಅರಮೆಯಿಕ್ ವರ್ಣಮಾಲೆ ಹುಟ್ಟಿತೆಂದೂ ಈ ಕಾಲವು ಕ್ರಿ. ಪೂ. 500ಕ್ಕಿಂತ ಹಿಂದೆ ಇರಲಾರದೆಂದೂ ಊಹಿಸುತ್ತಾರೆ. ಈ ಅರಮೆಯಿಕ್ ವರ್ಣಮಾಲೆಯು ಬಹಳ ಕಾಲದವರೆಗೂ ರಾಜಕೀಯ

ಪತ್ರ ವ್ಯವಹಾರದಲ್ಲಿದ್ದಿತು. ಪಾರಸಿಕರು ತಮ್ಮ ರಾಜನಾದ ಡೇರಿಯಸ್ ಎಂಬುವ ನೊಡನೆ ಪಂಜಾಬ್ ದೇಶವನ್ನು ಸುಮಾರು ಕ್ರಿ.ಪೂ. 500ರಲ್ಲಿ ಜಯಿಸಿದರು. ಈ ಕಾಲದಲ್ಲೇ ಭರತಖಂಡಕ್ಕೆ ಲಿಪಿಯು ಬಂದಿರಬೇಕೆಂದು ಮತ್ತೆ ಕೆಲವರ ವಾದ.

ಡಾಕ್ಟರ್ ಆಲ್‌ಫ್ರೆಡ್ ಮುಲ್ಲರ್ ಮೊದಲಾದ ಕೆಲವರು ಗ್ರೀಸ್ ರಾಜನಾದ ಅಲೆಕ್ಸಾಂಡರನು ಭರತಖಂಡಕ್ಕೆ ಬಂದ ಕಾಲವೇ (ಕ್ರಿ.ಪೂ. 325) ಇಲ್ಲಿ ಲಿಪಿಯ ಆರಂಭ ಕಾಲವೆನ್ನುತ್ತಾರೆ.

ಮತ್ತೆ ಕೆಲವರು ಅಶೋಕನ ಕಾಲಕ್ಕೆ (ಕ್ರಿ.ಪೂ. 250) ಭರತಖಂಡದಲ್ಲಿ ಲಿಪಿಯು ಹುಟ್ಟಿಯೇ ಇರಲಿಲ್ಲವೆಂದು ಅಭಿಪ್ರಾಯಪಡುತ್ತಾರೆ.

ಪ್ರಕೃತವಾದ ಕನ್ನಡಕ್ಕೂ ತೆಲುಗಿಗೂ ಲಿಪಿಯು ಸಮಾನವಾಗಿದೆ. ಈ ಲಿಪಿಯು ದಕ್ಷಿಣದಲ್ಲಿ ಜಾವ (Java) ದ್ವೀಪದವರೆಗೂ ವ್ಯಾಪಿಸಿದೆ. ಇದು ಭರತಖಂಡದ ಪಶ್ಚಿಮ ಭಾಗದ ಗುಹೆಗಳಲ್ಲಿಯ ಅಶೋಕನ (ದಕ್ಷಿಣ) ಶಾಸನಗಳ ಲಿಪಿಯಿಂದ (cave Inscriptions of western India from the South Ashokan characters) ಹುಟ್ಟಿದೆ. ಈ ಲಿಪಿಯು ಕ್ರಿ.ಪೂ. 250ಕ್ಕೆ ಸೇರಿದೆ. ಇದಕ್ಕೆ ಮೊದಲು ಭರತಖಂಡದಲ್ಲಿ ಬರಹದ ಗುರುತೇ ಇರಲಿಲ್ಲ. ಈ ಅಶೋಕನ ಲಿಪಿಗೆ ಮೂಲಭೂತವಾದುವು ಸುಮಾರು 9ನೆಯ ಶತಮಾನಕ್ಕೆ ಸೇರಿದ ಅರಮೆಯಿಕ್ ವರ್ಣಮಾಲೆಗಳಲ್ಲಿರುವ ಬೇಬಿಲಾನ್ ದೇಶದ ಲೇಖನಗಳು. ಇವು ಬ್ರಿಟಿಷ್ ಮ್ಯೂಸಿಯಂನಲ್ಲಿವೆ. ಎಲ್ಲ ಪೌರಸ್ತ್ಯ ದೇಶೀಯ ವರ್ಣಮಾಲೆಗಳೂ ಅಶೋಕನ ಶಾಸನಗಳಿಂದ ಉದ್ಭೂತವಾದುವೆಂದೂ ಈ ಅಶೋಕನ ಲಿಪಿಗೆ ಮೂಲವು ಫಿನೀಷಿಯನ್ ವರ್ಣಮಾಲೆಯೆಂದೂ ಈ ವರ್ಣಮಾಲೆಯು ಪ್ರಾಚೀನ ಈಜಿಪ್ಟ ರಾಜ್ಯದಲ್ಲಿ ಅಭಿಪ್ರಾಯ ಸೂಚಕಗಳಾದ ಶಿಲ್ಪಲೇಖಾ ಚಿಹ್ನೆಗಳಿಂದಲೂ (Hieratic Ideographs) ಮತ್ತು ಇದರಿಂದ ಅದೇ ದೇಶದ ಪ್ರಾಚೀನ ರಾಜರಲ್ಲಿ ನಾಲ್ಕನೆಯ ಸಂತತಿಯವರ ಚಿತ್ರರಚನೆಗಳಿಂದಲೂ (Hiereoglyphics of the fourth Dynasty) ಅನುಗತವಾಗಿ ಬಂದಿರುವುದಾಗಿದೆ. ಈ ಕಾಲವು ಸುಮಾರು ಕ್ರಿ.ಪೂ. 2450.

ಬ್ರಾಹ್ಮೀಲಿಪಿಯು ಸೈಂಧವ (ಹರಪ್ಪ ಮೊಹೆಂಜೊದಾರೊ) ಲಿಪಿಯಿಂದ ಬಂದಿರ ಬೇಕೆಂದು ಕೆಲವರ ವಾದ. ಸೈಂಧವ ಲಿಪಿಯನ್ನು ಓದಲು ಇನ್ನೂ ಸಾಧ್ಯವಾಗಿಲ್ಲ. ಅದನ್ನು ಓದಲು ಮಾಡಿರುವ ಪ್ರಯತ್ನಗಳು ಇನ್ನೂ ಸಫಲವಾಗಿಲ್ಲ. ಈಚೆಗೆ ಕರ್ನಾಟಕದ ಶ್ರೀ ಎಸ್. ಆರ್. ರಾವ್ ಅವರು ಅದರ ರಹಸ್ಯವನ್ನು ಭೇದಿಸುವುದ ರಲ್ಲಿ ಸಾಕಷ್ಟು ಯಶಸ್ವಿಯಾಗಿದ್ದಾರೆ. ಆ ಬರಹದ ಹಲವು ಚಿಹ್ನೆಗಳಲ್ಲಿ ಚಿತ್ರಲೇಖನ ವನ್ನೂ ಗುರುತಿಸಬಹುದು. ಮೀನು, ಮನುಷ್ಯ, ಬಿಟ್ಟು, ಮರ. ಮುಂತಾದುವುಗಳ ಚಿತ್ರಗಳು ಸ್ಪಷ್ಟವಾಗಿವೆ. ಆದರೆ ಸೈಂಧವ ಲೇಖನದಲ್ಲಿ ಚಿತ್ರಗಳಿದ್ದರೂ ಅದು ಚಿತ್ರಲಿಪಿಯಾಗಿರದೆ, ಬಹುಪಾಗಿ ಮುಂದುವರೆದ ಬರವಣಿಗೆಯ ಘಟ್ಟವನ್ನು

ಮುಟ್ಟಿರುವಂತೆ ಕಾಣುತ್ತದೆ. ಅಲ್ಲಿ ಸುಮಾರು 300 ಚಿಹ್ನೆಗಳಿರುವುದರಿಂದ ಅದು ಪದಲೇಖನ ಘಟ್ಟಕ್ಕಿಂತ ಈಚಿನ ದೆಶೆಯಲ್ಲಿದೆಯೆಂದೂ ಬಹುಶಃ ಅಕ್ಷರ ಲೇಖನದ ಘಟ್ಟಕ್ಕೆ ಈಚಿನ ಘಟ್ಟದಲ್ಲಿದೆಯೆಂದೂ ಹಾಗೆಯೇ ಅಕ್ಷರ ಲೇಖನ ಘಟ್ಟಕ್ಕೇ ಸೇರಿದು ದೆಂದೂ ಊಹಿಸುತ್ತಾರೆ. ಸೈಂಧವ ಲೇಖನವು ಮೂಲತಃ ಚಿತ್ರಗಳಿಂದ ಆರಂಭ ವಾದುದು, ಹಲವು ಘಟ್ಟಗಳನ್ನು ದಾಟಿ ಮುಂದುವರೆದಿರುವಂತೆ ಕಾಣುತ್ತದೆ. ಅಲ್ಲಿಯ ಚಿಹ್ನೆಗಳನ್ನು ಓದಲು ಸಾಧ್ಯವಾಗಿರುವುದಿಲ್ಲವಾಗಿ ಈ ವಿಷಯದಲ್ಲಿ ಏನನ್ನೂ ಹೇಳಲು ಸಾಧ್ಯವಾಗುವುದಿಲ್ಲ.

## ಭಾರತದಲ್ಲಿ ಲಿಪಿಯ ಪರಿಚಯ

ಭಾರತದಲ್ಲಿ ಲಿಪಿಯ ಪರಿಚಯ ಬಹಳ ಹಿಂದಿನ ಕಾಲದಿಂದಿದ್ದಿತೆಂದು ಹೇಳು ವುದಕ್ಕೆ ಪ್ರಾಚೀನಸ್ಮೃತಿಗಳಾದ ವಾಸಿಷ್ಠಧರ್ಮ ಸೂತ್ರ, ಮನುಸ್ಮೃತಿ. ಯಾಜ್ಞವಲ್ಕ್ಯಸ್ಮೃತಿ, ಮೊದಲಾದುವುಗಳಲ್ಲಿ ಸೂಕ್ತ ನಿರ್ದೇಶಗಳಿವೆ. ವಾತ್ಸ್ಯಾಯನನ ಕಾಮಸೂತ್ರದಲ್ಲಿ 64 ಕಲೆಗಳಲ್ಲಿ ಪುಸ್ತಕವಾಚನವೂ ಒಂದೆಂದೂ ಮನೆಯಲ್ಲಿರಬೇಕಾದ ಪದಾರ್ಥಗಳಲ್ಲಿ ಪುಸ್ತಕವೂ ಒಂದೆಂದೂ ಉಕ್ತವಾಗಿದೆ.

ಕೌಟಲೀಯ ಅರ್ಥಶಾಸ್ತ್ರದಲ್ಲಿ ಲಿಪಿಯ ವಿಷಯವೂ ಹೇಳಿದೆ. ಚಾಣಕ್ಯ ನೀತಿ ಯಲ್ಲಿಯೂ ಪುಸ್ತಕ ವಿದ್ಯೆ ಪ್ರಸಕ್ತವಾಗಿದೆ. ಚಾಣಕ್ಯನ ಕಾಲವಾದ ಕ್ರಿ.ಪೂ. 366 –292ರಲ್ಲಿ ಲಿಪಿಯು ರಾಜಕೀಯ ವ್ಯವಹಾರದಲ್ಲಿ ಬಹಳ ಪ್ರಾಶಸ್ತ್ಯವನ್ನು ಹೊಂದಿದ್ದಿ ತೆಂದು ತಿಳಿಯಬರುತ್ತದೆ.

ವಾಲ್ಮೀಕಿ ರಾಮಾಯಣದ ಪಟ್ಟಾಭಿಷೇಕ ಸರ್ಗದಲ್ಲಿ ರಾಮಾಯಣವನ್ನು ಲೇಖನ ಮಾಡುವವನು ಸ್ವರ್ಗವಾಸವನ್ನು ಪಡೆಯುತ್ತಾನೆಂದು ಹೇಳಿದೆ. ಅದೇ ಗ್ರಂಥದಲ್ಲಿ ಮಾರೀಚನು ರಕಾರಾದಿಯಾದ ರತ್ನ, ರಥ ಮುಂತಾದ ಪದಗಳನ್ನು ಕೇಳಿದಾಗ ತನಗೆ ಸಂತ್ರಾಸವುಂಟಾಗುತ್ತದೆಂದು ಹೇಳುತ್ತಾನೆ.

ಮಹಾಭಾರತವನ್ನು ವ್ಯಾಸಮಹರ್ಷಿಯು ಹೇಳುತ್ತಿದ್ದಂತೆಯೇ ಗಣಪತಿಯು ಬರೆದನೆಂದು ಆ ಗ್ರಂಥದಿಂದಲೇ ತಿಳಿದುಬರುತ್ತದೆ. ಪಾಂಡವರ ಕಾಲವು ಕಲಿಯುಗ ಹುಟ್ಟಿದ ಮೇಲೆ 653 ವರ್ಷಗಳ ಕಾಲವೆಂದು ಹೇಳಿದೆ. ವರಾಹ ಮಿಹಿರನು ಯುಧಿಷ್ಠಿರನ ಕಾಲಕ್ಕೂ ಶಾಲಿವಾಹನನ ಕಾಲಕ್ಕೂ 2526 ವರ್ಷಗಳೆಂದು ತಿಳಿಸು ತ್ತಾನೆ.

ವೇದಗಳ ಪಠನ ಶೈಲಿಯ ಕ್ರಮವೂ ಲಿಖಿತ ಪಾಠನದೋಷವೂ ಪಾಣಿನೀಯ ಶಿಕ್ಷೆಯಲ್ಲಿ ಹೇಳಿವೆ.

ದೇವನಾಗರ ಲಿಪಿಯಲ್ಲಿ ರೇಫಕ್ಕೆ ಬೇರೆ ಸಂಯುಕ್ತಾಕ್ಷರಗಳನ್ನು ಹತ್ತಿಸುವ ಪದ್ಧತಿಯಿಲ್ಲ. ಈಗ ಕನ್ನಡದಲ್ಲಿ ವಿಜಾತೀಯ ಸಂಯುಕ್ತಾಕ್ಷರಗಳನ್ನು ಸೇರಿಸುವ ರೂಢಿಯಿದೆ.

ಅಮರಸಿಂಹನು ತನ್ನ ನಿಘಂಟುವಾದ 'ಅಮರಕೋಶ'ದಲ್ಲಿ ಲಿಪಿ, ಲಿಪಿಕಾರ ಎಂಬ ಶಬ್ದಗಳನ್ನು ಪ್ರಯೋಗಿಸಿದ್ದಾನೆ. ಇವನ ಕಾಲವೂ ಕ್ರಿ. ಪೂ. 3ನೆಯ ಶತಮಾನವೆಂದು ಊಹಿಸುತ್ತಾರೆ.

ಪ್ರಸಿದ್ಧ ಸಂಸ್ಕೃತ ವೈಯಾಕರಣನಾದ ಪಾಣಿನಿಯು ತನ್ನ ಧಾತುಪಾಠದಲ್ಲಿ ಲಿಪಿಕರ, ಲಿಬಿಕರ ಎಂದು ಲಕ್ಷ್ಯವನ್ನು ತೋರಿಸುವಾಗ ಅಕ್ಷರ ಪ್ರಸಕ್ತಿ ಬರುತ್ತದೆ. ಈತನ ಕಾಲದಲ್ಲಿ ಲಿಪಿಯು ಪ್ರಚಾರದಲ್ಲಿದ್ದಿತೆಂದು ಎಲ್ಲರೂ ಒಪ್ಪುತ್ತಾರೆ. ಇವನ ಕಾಲವು ಕ್ರಿ. ಪೂ. 500–350ರಲ್ಲಿ ಓಲಾಡುತ್ತದೆ.

ಪಾಣಿನಿಯು ತನ್ನ ವ್ಯಾಕರಣಕ್ಕೆ ಪ್ರಮಾಣವಾಗಿ ಆಪಿಶಲಿ, ಸ್ಫೋಟಾಯನ, ಗಾರ್ಗ್ಯ, ಶಾಕಲ್ಯ, ಶಾಕಟಾಯನ ಮೊದಲಾದ ಪ್ರಾಚೀನ ವೈಯ್ಯಾಕರಣರ ಮತವನ್ನು, ಯಾಸ್ಕರ ಹೆಸರನ್ನು ಅನುವಾದ ಮಾಡಿದ್ದಾನೆ. ಇವರೆಲ್ಲ ಆದಿಯಲ್ಲಿ ಅಧಿಕಾರಾದಿ ಪರಿಭಾಷಾದಿ ಸೂತ್ರಗಳನ್ನು ನಿರ್ಮಿಸಬೇಕಾದರೆ ಅವರಿಗೆ ಲಿಪಿಜ್ಞಾನ ಆವಶ್ಯಕ.

ಯಾಸ್ಕನೂ ತನ್ನ ನಿರುಕ್ತದಲ್ಲಿ ತನ್ನ ಪೂರ್ವಿಕರನ್ನು ಸ್ಮರಿಸಿದ್ದಾನೆ. ಆ ವೈಯ್ಯಾಕರಣರಿಗೂ ಲಿಪಿಜ್ಞಾನವಿದ್ದೇ ಇರಬೇಕು.

ವೇದದಲ್ಲಿ ಗಾಯತ್ರಿ, ತ್ರಿಷ್ಟುಪ್, ಜಗತ್, ಪಂಕ್ತಿ ಮೊದಲಾದ ಛಂದಸ್ಸುಗಳ ಹೆಸರು ಹೇಳಿದೆ; ಇದನ್ನು ಅನುಸರಿಸಿ ಪಿಂಗಳನ ಛಂದಶ್ಶಾಸ್ತ್ರವು ಹುಟ್ಟಿದೆ. ಇದರಲ್ಲಿ ಬರುವ ಷಟ್ಪ್ರತ್ಯಯಗಳಾದ ಪ್ರಸ್ತಾರ, ಉದ್ದಿಷ್ಟ, ನಷ್ಟ, ಏಕದ್ವ್ಯಾದಿ ಲಗಕ್ರಿಯೆ, ಸಂಖ್ಯಾನ, ಅಧ್ವಯೋಗಗಳಿಗೆ ಲಿಪಿಜ್ಞಾನವಿಲ್ಲದೆ ಸಾಧ್ಯವಿಲ್ಲ.

ವೇದಾಂಗವಾದ ಜ್ಯೋತಿಶ್ಶಾಸ್ತ್ರಕ್ಕೆ ಗಣಿತವಿಲ್ಲದೆ ನಿರ್ವಾಹವಾಗುವುದಿಲ್ಲ. ವರಾಹಮಿಹಿರ, ಭಾಸ್ಕರಾಚಾರ್ಯರು. ಗಣಿತಶಾಸ್ತ್ರವಿಶಾರದರು.

ಗ್ರೀಕರಿಗೆ 10000ದವರೆಗೂ ರೋಮನ್ನರಿಗೆ 1000ದವರೆಗೂ ಎಣಿಕೆ ಗೊತ್ತಿತ್ತಂತೆ. ಯಜುರ್ವೇದದಲ್ಲಿ ಪದಾರ್ಥ ಸಂಖ್ಯೆಯವರೆಗೆ ಸಂಖ್ಯೆಗಳನ್ನು ಹೆಸರಿಸಿದೆ. ಪದಾರ್ಥದ ಸಂಖ್ಯೆ 1000000000000. ಏಕ, ದಶ, ಶತ, ಸಹಸ್ರ, ಅಯುತ, ಯುತ, ಪ್ರಯುತ, ಅರ್ಬುದ, ನ್ಯರ್ಬುದ, ಸಮುದ್ರಮಧ್ಯ, ಅಂತ, ಪದಾರ್ಥ ಎಂಬುವು ಊರ್ಧ್ವಕ್ರಮ ಸಂಖ್ಯೆಗಳು. ಸಾಮವೇದದಲ್ಲಿ ದಕ್ಷಿಣೆಯು ದ್ವಿಗುಣಿತವಾದುದನ್ನು 24 ರಿಂದ 3, 93, 216ರವರೆಗೆ ಹೇಳಿದೆ. ಶತಪಥ ಬ್ರಾಹ್ಮಣದಲ್ಲಿ ಒಂದು ದಿನಕ್ಕೆ 30 ಮುಹೂರ್ತವೆಂದೂ, ಒಂದು ಮುಹೂರ್ತಕ್ಕೆ 15 ಕ್ಷಿಪ್ರವೆಂದೂ ಒಂದು ಕ್ಷಿಪ್ರಕ್ಕೆ 15 ಏತರ್ಹಿಯೆಂದೂ ಒಂದು ಏತರ್ಹಿಗೆ 15 ಇದಾನೀಂ ಎಂದು ಒಂದು ಇದಾನೀಂಗೆ 15 ಪ್ರಾಣವೆಂದೂ ಹೇಳಿದೆ. ಇದರಿಂದ ಒಂದು ದಿನಕ್ಕೆ $(30 \times 15 \times 15 \times 15 \times 15)$ 15,18,750 ಪ್ರಾಣಗಳು ಆಗುತ್ತವೆ. ಇಂತಹ ಗಣನೆಗೆ ಲಿಪಿಜ್ಞಾನವಿಲ್ಲದೆ ಸಾಧ್ಯವಿಲ್ಲ.

ಗ್ರೀಸ್ ದೇಶದ ರಾಜನಾದ ಅಲೆಕ್ಸಾಂಡರನ (ಕ್ರಿ. ಪೂ. 326) ಸೇನಾಪತಿಯಾದ ನಿಯಾರ್ಕಸ್ ಎಂಬಾತನು ಭಾರತೀಯರು ಹತ್ತಿಯ ಬಟ್ಟೆಯಿಂದ ಮಾಡಿದ ಕಾಗದದ (ಕಡತಗಳ) ಮೇಲೆ ಅಕ್ಷರಗಳನ್ನು ಬರೆಯುತ್ತಿದ್ದರೆಂದು ಹೇಳುತ್ತಾನೆ. ಸೆಲ್ಯೂಕಸ್ಸಿನ ರಾಯಭಾರಿಯಾದ ಮೆಗಾಸ್ತನೀಸ್ (ಕ್ರಿ. ಪೂ. 306) ಎಂಬಾತನು ಭರತಖಂಡದವರು ಜಾತಕಗಳನ್ನೂ ಪಂಚಾಂಗಗಳನ್ನೂ ಗುಣಿಸಿ ಬರೆಯುತ್ತಿದ್ದರೆಂದೂ ಯುಗಾದಿಯ ದಿನಗಳಲ್ಲಿ ಜನರಿಗೆ ಪಂಚಾಂಗವನ್ನು ಓದಿ ಅದರ ಫಲವನ್ನು ತಿಳಿಸುತ್ತಿದ್ದರೆಂದೂ ಹೇಳುತ್ತಾನೆ.

ಜಾತಕಗಳ ವಿಷಯವು ಜಾರ್ಜ್ ಬ್ಯೂಹ್ಲರ್ ಬರೆದಿರುವ 'ಬ್ರಾಹ್ಮೀಲಿಪಿಯ ಉತ್ಪತ್ತಿ' ಎಂಬ ಪುಸ್ತಕದಲ್ಲಿ ಹೇಳಿದೆ. ಇದರಲ್ಲಿ ಕಟಾಹಕ ಜಾತಕ, ಮಹಾಸುತಸೋಮ ಜಾತಕ, ಹಾರೀತ ಜಾತಕ, ಸಂಭವ ಜಾತಕ ಮೊದಲಾಗಿ ಅನೇಕ ಜಾತಕಗಳು ವಿವರಿಸಲ್ಪಟ್ಟಿವೆ.

'ಐತರೇಯಾರಣ್ಯಕ'ದಲ್ಲಿ ಊಷ್ಮನ್, ಸ್ಪರ್ಶ, ಸ್ವರ, ಅನ್ತಸ್ಥ, ವ್ಯಂಜನ, ಘೋಷ, ಇತ್ಯಾದಿಗಳ ನಿರ್ವಚನವಿರುತ್ತದೆ. ತೈತ್ತರೀಯೋಪನಿಷತ್ತಿನಲ್ಲಿ ವರ್ಣ, ಸ್ವರ, ಮಾತ್ರ, ಇವುಗಳ ಹೆಸರಿದೆ. ಶತಪಥ ಬ್ರಾಹ್ಮಣದಲ್ಲಿ ತ್ರಿಲಿಙ್ಗ, ಏಕವಚನ, ಬಹುವಚನ ಇವುಗಳ ವಿವೇಚನೆ ಇದೆ.

ವ್ಯಾಕರಣ, ನಿಘಂಟು ಇವುಗಳಲ್ಲಿಯೂ ಇತರ ಶಾಸ್ತ್ರಗಳಲ್ಲಿಯೂ ಸಂಜ್ಞೆಗಳನ್ನು ಇಡಬೇಕಾದರೆ ಸಮಾಹಾರವನ್ನು ಮಾಡಿಟ್ಟುಕೊಂಡು ಒಂದು ಸಂಜ್ಞೆಯಲ್ಲಿ ಹುದುಗಿಸಬಹುದಾದ ಅನೇಕ ಸಂಜ್ಞೆಗಳಲ್ಲಿ ಅನುಗಮವಾಗುವಂತೆ ನಿಷ್ಕರ್ಷಿಸಿ ಸುಜ್ಞಾನಸಂಜ್ಞೀ ಪ್ರತ್ಯಾಯನವನ್ನುಂಟುಮಾಡಬೇಕು. ಹೀಗೆ ಮಾಡಬೇಕಾದರೆ ಲಿಪಿಯ ನೆರವಿಲ್ಲದೆ ಪದಗಳನ್ನೂ ಅವುಗಳ ಅಂತರ್ಭೇದಗಳನ್ನೂ ಸ್ಮೃತಿಯಲ್ಲಿಟ್ಟುಕೊಂಡು ರಚಿಸಲು ಸಾಧ್ಯವಿಲ್ಲ. ಆದುದರಿಂದ ವೇದಗಳ ಕಾಲದಲ್ಲಿ ಲಿಪಿಜ್ಞಾನವಿತ್ತೆಂದು ಹೇಳಬೇಕಾಗುತ್ತದೆ.

ಐತರೇಯ ಬ್ರಾಹ್ಮಣದಲ್ಲಿ ಓಮ್ ಎಂಬ ಅಕ್ಷರವು ಅಕಾರ, ಉಕಾರ, ಮಕಾರಗಳು ಸೇರಿ ನಿಷ್ಪನ್ನವಾಗಿದೆ. ಮುಂಡೂಕ್ಯೋಪನಿಷತ್ತಿನಲ್ಲಿ ಅಕಾರ ಉಕಾರ ಮಕಾರಗಳ ಉಪಾಸನಾಕ್ರಮವೂ ಓಂಕಾರೋಪಾಸನವೂ ವಿವರವಾಗಿ ಹೇಳಿದೆ. ಛಾಂದೋಗ್ಯ, ತೈತ್ತರೀಯ, ಮುಂಡಕ ಉಪನಿಷತ್ತುಗಳಲ್ಲಿಯೂ ಓಂಕಾರ ಸ್ವರೂಪವೂ ಉಪಾಸನೆಯೂ ಹೇಳಿದೆ. ಛಾಂದೋಗ್ಯದಲ್ಲಿ ಅಕ್ಷರ ಎಂಬ ಶಬ್ದ ವಿರುವುದಲ್ಲದೆ ಈಕಾರ ಊಕಾರ ಏಕಾರಗಳ ಹೆಸರೂ ಇವುಗಳ ಅಧಿದೇವತೆಗಳ ಹೆಸರೂ ಹೇಳಿದೆ. ಇದೇ ಮೇರೆಗೆ ಓಂಕಾರವನ್ನು ಮುಖ್ಯವಾಗಿ ಬ್ರಹ್ಮನಿಗೆ ಆಲಂಬನವಾಗಿಯೂ ಪ್ರತೀಕವಾಗಿಯೂ ಹೇಳಿದೆ. ಅ + ಉ + ಮ್ = ಓಮ್ ಎಂಬ ಈ ಕ್ರಮವು ಲೇಖನವಿಲ್ಲದೆ ಸಾಧ್ಯವಿಲ್ಲ.

ಸಂಹಿತೆಗೆ ವ್ಯಾಖ್ಯಾರೂಪವಾಗಿ ಬ್ರಾಹ್ಮಣ ವಾಕ್ಯಗಳಿವೆ. ಲೇಖನ ಸಾಧನ ವಿಲ್ಲದೆ ಯಾವ ಮಂತ್ರದಿಂದ ಯಾವ ಮಂತ್ರದವರೆಗೆ ವ್ಯಾಖ್ಯಾನ ಮಾಡಬೇಕೆಂಬು ದನ್ನು ನಿಷ್ಕರ್ಷಿಸಿ ಸ್ಮೃತಿಮಾತ್ರದಿಂದ ವ್ಯಾಖ್ಯಾರಚನೆಯನ್ನು ಮಾಡಲು ಸಾಧ್ಯವಿಲ್ಲ ವಾಗಿ ಅನುಮಾನ ಮತ್ತು ಅರ್ಥಾಪತ್ತಿ ಪ್ರಮಾಣಗಳಿಂದ ಲಿಪಿಯ ಅಸ್ತಿತ್ವವನ್ನು ನಿರ್ಣಯಿಸಬಹುದು.

ಬುದ್ಧನ ಚರಿತರೂಪವಾದ 'ಲಲಿತ ವಿಸ್ತರ'ವೆಂಬ ಗ್ರಂಥದಲ್ಲಿ 64 ಲಿಪಿಗಳ ಹೆಸರು ಬರುತ್ತದೆ. ಇವುಗಳಲ್ಲಿ ಬ್ರಾಹ್ಮೀ ಮತ್ತು ಖರೋಷ್ಠೀ ಲಿಪಿಗಳ ಹೆಸರು ಆದಿಯಲ್ಲಿವೆ.

ಜೈನರ ಗ್ರಂಥವಾದ 'ಭಗವತೀಸೂತ್ರ'ದಲ್ಲಿ "ಣಮೋ ಬಮ್ಭೀಏ ಲಿಪಿ ಏ" ಎಂದು ಇದೆ. ಈ ಬ್ರಾಹ್ಮೀಲಿಪಿಯನ್ನೇ ಅಶೋಕನ ಲಿಪಿಯೆಂದು ಹೇಳುವುದು ರೂಢಿಯಾಗಿದೆ.

'ಮಹಾವಗ್ಗ'ದಲ್ಲಿ ಸಿದ್ಧಾರ್ಥನು ವಿದ್ಯಾರ್ಥಿಯಾಗಿ 'ಚಂದನಫಲಕ'ವನ್ನೂ 'ಸುವರ್ಣಶಲಾಕೆ'ಯನ್ನೂ ತೆಗೆದುಕೊಂಡು ಲಿಪಿಶಾಲೆಗೆ ಹೋಗಿ ತನ್ನ ಅಧ್ಯಾಪಕ ನಾದ ವಿಶ್ವಾಮಿತ್ರನು ಹೇಳಿಕೊಟ್ಟದ್ದನ್ನು ಕೇಳಿ ಬರೆಯುತ್ತಿದ್ದನೆಂದು ಹೇಳಿದೆ. ಬುದ್ಧನ ನಿರ್ವಾಣವು ಕ್ರಿ.ಪೂ. 487ರಲ್ಲಿ ಕುಸಿನಾರ್ ಪಟ್ಟಣದಲ್ಲಿ ಆಯಿತೆಂದು ಇವನ ದೇಹವನ್ನು ಚಂದನ ಕಾಷ್ಠಗಳಿಂದ ದಹಿಸಿದರೆಂದೂ ಅಸ್ಥಿಗಳನ್ನು ಎಂಟು ಜನರು ಪಾಲು ಮಾಡಿಕೊಂಡರೆಂದೂ ಐತಿಹ್ಯವಿದೆ.

ಅಶೋಕನ ಕಾಲಕ್ಕೆ ಹಿಂದೆಯೇ ಇದ್ದ ಶಿಲಾ ಲೇಖಗಳು ರಾಜಪುತ್ರಸ್ಥಾನ ದಲ್ಲಿಯೂ ನೇಪಾಳ ದೇಶದಲ್ಲಿಯೂ ದೊರೆಯುತ್ತದೆ. ಮೊದಲನೆಯದು ಅಜ್ಮೀರ್ ಪ್ರದರ್ಶನ ಶಾಲೆಯಲ್ಲಿದೆ. ಈ ಶಾಸನದ ಕಾಲವು ಅದರ ಆಂತರ್ಯ ಪ್ರಮಾಣದಿಂದ ಕ್ರಿ. ಪೂ. 443 ಆಗುತ್ತದೆ. ಮತ್ತೊಂದು ಶಾಸನವು ನೇಪಾಳ ದೇಶದಲ್ಲಿಯ 'ಪಿಪ್ರಹ್ವಾ' ಎಂಬ ಸ್ಥಳದಲ್ಲಿ ದೊರೆತ ಒಂದು ಬೌದ್ಧಸ್ತೂಪದಲ್ಲಿದೆ. ಇಲ್ಲಿ ಬುದ್ಧನ ಅಸ್ಥಿಗಳಿದ್ದವೆಂದು ಅಭಿಪ್ರಾಯವಿದೆ.

ಈಚೆಗೆ ಭರತಖಂಡದ ಲೇಖನ ಪುಸ್ತಕಗಳು ಯಾರ್ಕಂಡ್ ನಗರದಲ್ಲಿ ದೊರೆತ ವೆಂದು ಲಿಪಿ ಶಾಸ್ತ್ರಜ್ಞರು ತಿಳಿಸುತ್ತಾರೆ. ಇದರಿಂದ ವಿದೇಶೀಯರನೇಕರು ಇಲ್ಲಿಯ ಲೇಖನಗಳನ್ನು ಬಹುಕಾಲದ ಹಿಂದೆಯೇ ಸೂರೆಮಾಡಿಕೊಂಡು ಹೋಗಿರಬೇಕು.

ಬ್ರಾಹ್ಮಣರ ಷೋಡಶ ಕರ್ಮಗಳಲ್ಲಿ ಒಂದಾದ ಸೀಮಂತದ ಸಮಯದಲ್ಲಿ ಕೆಲವು ಮಂತ್ರಗಳನ್ನು ವೀಣೆಯಲ್ಲಿ ಗಾಯನ ಮಾಡುತ್ತ ಹೇಳಬೇಕೆಂದು ವಿಧಿಯಿದೆ. ಇದು ಈಗಲೂ ರೂಢಿಯಲ್ಲಿದೆ. ಆ ಕಾಲದಲ್ಲಿ ವೀಣಾಗಾಯನವೆಂಬ ಕಲೆಯು ಎಲ್ಲರಿಗೂ ಪರಿಚಯವಾಗಿದ್ದಿತು. ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ- ಈ ಶಾಸ್ತ್ರಗಳನ್ನು ನಿರ್ಮಿಸಲು ಬುದ್ಧಿಕೌಶಲ್ಯವಿದ್ದವರಿಗೆ ಅಕ್ಷರಗಳಿಗೆ ಸಂಜ್ಞೆಗಳನ್ನು ಕಲ್ಪಿಸಿಕೊಳ್ಳುವುದು ಅಸಾಧ್ಯವಾಗಿರಲಿಲ್ಲ.

ಆದರೆ ವೇದಗಳನ್ನು ಕಂಠಪಾಠ ಮಾಡಬೇಕಲ್ಲದೆ ಬರೆಯಕೂಡದು ಎಂದು ನಿಷೇಧ ಮಾಡಿರುವುದರಿಂದ ಅರ್ಥವಾದರೂ ಆಗಬಹುದು. ಲೇಖನಕ್ರಮದಿಂದ ಉಚ್ಚಾರಣಾನುಪೂರ್ವಿಯು ಶಿಥಿಲವಾಗಬಹುದೆಂಬ ಶಂಕೆಯೇ ಕಾರಣ. ವೇದಗಳ ಲೇಖನವನ್ನು ಪ್ರತಿಷೇಧಮಾಡಿದೆಯೇ ವಿನಾ ವೇದಾಂಗಗಳ ಲೇಖನವನ್ನು ಪ್ರತಿಷೇಧ ಮಾಡಿಲ್ಲ. ಇವೇ ಮೊದಲಾದ ಪ್ರಮಾಣಗಳಿಂದಲೂ ಇನ್ನೂ ಇತರ ಆಂತರ್ಯ ಪ್ರಮಾಣಗಳಿಂದಲೂ ಪ್ರಾಚೀನಾರ್ಯರಿಗೆ ವೇದ ಕಾಲದಲ್ಲಿಯೇ ಲಿಪಿಜ್ಞಾನ ವಿತ್ತೆಂದು ಸಾಧಾರವಾಗಿ ರೂಪಿಸಬಹುದು.

ಪೂರ್ವಕಾಲದಲ್ಲಿ ಲೇಖನ ಸಾಮಗ್ರಿಗಳು ವಿವಿಧ ರೀತಿಯವಾಗಿದ್ದುವು. ಭೂರ್ಜಪತ್ರ, ತಾಳಪತ್ರ, ಕಡತಗಳು, ತಾಮ್ರಫಲಕ, ಚಂದನಫಲಕ, ಸುವರ್ಣಪತ್ರ ಮೊದಲಾದುವು ಸೌಕರ‍್ಯಾನುಸಾರವಾಗಿ ಉಪಯೋಗವಾಗುತ್ತಿದ್ದವು. ಶಿಲಾಲಿಪಿ ಗಳಂತೂ ಸರ್ವಸಾಮಾನ್ಯ. ಗಣಿಕೆಕಡ್ಡಿ, ಲೋಹಶಲಾಕೆಗಳು, ಬಳಪ, ಬಗಿನೆಯ ಕಡ್ಡಿ, ಲಾಳದ ಕಡ್ಡಿ, ಶಿಲಾಲೇಖನಕ್ಕೆ ಟಂಕಗಳು ಇವೆಲ್ಲ, ಲೇಖನಿಗಳಾಗಿದ್ದವು. ಪಕ್ಷಿಗಳ ಗರಿ ಯಿಂದ ಬರೆಯುವುದು ಮಹಮ್ಮದೀಯರಿಂದ ಈ ದೇಶದಲ್ಲಿ ಪ್ರಚಾರಕ್ಕೆ ಬಂದಿತು.

ಮಸಿಯು ಅನೇಕ ರೀತಿಗಳಲ್ಲಿ ತಯಾರುಮಾಡಲ್ಪಡುತ್ತಿದ್ದವು. ಭೂರ್ಜ ಪತ್ರದ ಮೇಲೆ ಬರೆಯುವ ಮಸಿಯನ್ನು ಬಾದಾಮಿಯ ಇಜ್ಜಲನ್ನು ಗೋಮೂತ್ರ ದಲ್ಲಿ ಕುದಿಯಿಸಿ ಮಾಡುತ್ತಿದ್ದರು. ತಾಳವೋಲೆಗಳಿಗೆ ದೀಪದ ಕಪ್ಪನ್ನು ಕುಂಬಳದ ಎಲೆಯ ರಸದಲ್ಲಿ ಮರ್ದಿಸಿ ಉಪಯೋಗಿಸುತ್ತಿದ್ದರು. ಬರೀ ದೀಪದ ಮಸಿಯ ಪುಡಿಯನ್ನು ಅಕ್ಷರಗಳ ಮೇಲೆ ಉದರಿಸಿ ಉಜ್ಜುವುದೂ ಉಂಟು. ಕಡತಗಳ ಮೇಲೆ ಬಳಪದಿಂದಲೂ ಸೀಮೆಯ ಸುಣ್ಣದಿಂದಲೂ ಬರೆಯುವುದು ವಾಡಿಕೆ.

ಕಾಗದವೆಂಬುದು ಅರಬ್ಬೀದೇಶದ 'ಕಾಗಜ್' ಎಂಬುದರ ಅಪಭ್ರಂಶ. ಆದುದ ರಿಂದ ಕಾಗದವು ಅರಬ್ಬೀದೇಶದಿಂದಲೇ ಭಾರತಕ್ಕೆ ಬಂದಿರಬೇಕು.

ಇಷ್ಟೆಲ್ಲ ಕಾರಣಗಳಿಂದ ಭರತಖಂಡದಲ್ಲಿ ಲಿಪಿಯ ಅಸ್ತಿತ್ವವು ನಿಸ್ಸಂದೇಹವಾಗಿ ಸಾವಿರಾರು ವರ್ಷಗಳಿಂದ ಸಿದ್ಧವಾಗಿದ್ದರೂ ಆದಿಕಾಲದ ಲಿಪಿಯ ನಿಷ್ಕೃಷ್ಟರೂಪವು ನಮಗೆ ಪರಿಚಯವಾಗಿಲ್ಲ. ಈಗ ನಮಗೆ ಭಾರತದಲ್ಲಿ ಪರಿಚಯವಾಗಿರುವುದು ಸೈಂಧವಲಿಪಿ, ಖರೋಷ್ಠೀ ಮತ್ತು ಬ್ರಾಹ್ಮೀಲಿಪಿಗಳು. ಇವುಗಳಲ್ಲಿ ಸೈಂಧವ ಲಿಪಿಯ ವಿಷಯವನ್ನು ಈಗಾಗಲೆ ನಿರೂಪಿಸಿದೆ. ಅದನ್ನು ಪೂರ್ಣವಾಗಿ ಓದುವ ವರೆಗೆ ಅದರ ವಿಷಯವಾಗಿ ತೃಪ್ತಿಕರವಾಗಿ ಏನನ್ನೂ ಹೇಳಲು ಸಾಧ್ಯವಿಲ್ಲ. ಖರೋಷ್ಠೀ ಲಿಪಿಯು ಬ್ರಾಹ್ಮೀಲಿಪಿಯ ಶಾಸನಗಳಲ್ಲಿಯೇ ಪರಿಚಯವಾಗಿದೆ. ಇದಕ್ಕೆ ಈ ಹೆಸರು ಬರಲು ಕಾರಣ ಖಚಿತವಾಗಿ ತಿಳಿಯದು. ಇದನ್ನು ಮ್ಲೇಚ್ಛರು ಬಳಸುತ್ತಿದ್ದರಿಂದಲೂ ಕತ್ತೆಯ ಚರ್ಮದ ಮೇಲೆ ಬರೆಯುತ್ತಿದ್ದುದರಿಂದಲೂ ಬಹುಶಃ ಅಕ್ಷರಗಳು ಡೊಂಕಾಗಿ ಬರೆಯುತ್ತಿದ್ದುದರಿಂದಲೂ ಕತ್ತೆಯ ತುಟಿ (ಖರ + ಓಷ್ಠ) ಎಂದು ವ್ಯಂಗ್ಯವಾಗಿ ಕರೆದಿರಬಹುದು. ಆ ಹೆಸರೇ ರೂಢಿಗೆ ಬಂದಿರ

ಬಹುದು. (ಖರೋಷ್ಠ ಎಂಬುವನು ಈ ಲಿಪಿಯ ಬಳಕೆಗೆ ಕಾರಣವಾದುದರಿಂದ ಈ ಹೆಸರು ಬಂದಿದೆಯೆಂದು ಕೆಲವರ ವಾದ.) ಅರೇಬಿಯ ಭಾಷೆಯ 'ಖರೋಟ್ಟ' ಎಂಬ ಪದ ಸಂಸ್ಕೃತದಲ್ಲಿ 'ಖರೋಷ್ಠ' ಎಂದಾಗಿ ಅದು ಭಾರತದಲ್ಲಿ ಬಳಕೆಗೆ ಬಂದಿರಬೇಕೆಂಬುದು ಡಿರೆಂಜರ್ ಎಂಬುವರ ವಾದ. ಇದರ ವಿಷಯವಾಗಿ ಕೂಲಂಕಷವಾಗಿ ಹೆಚ್ಚು ಪರಿಶೀಲಿಸಿರುವ ದಾಸಗುಪ್ತ ಅವರು ಖರೋಷ್ಠಿ ಎಂಬುದು ಇರಾನಿಯನ್ ಭಾಷೆಯ 'ಖರಪೋಸ್ತ' ಎಂಬ ಪದದಿಂದ ಬಂದಿರಬೇಕೆಂಬ ಪ್ರಿಜ್‌ಲುಸ್ಕಿಯವರ ವಾದವನ್ನು ಅನುಮೋದಿಸಿದ್ದಾರೆ. ಖರಪೋಸ್ತ ಎಂದರೆ ಕತ್ತೆಯ ಚರ್ಮ ಎಂದರ್ಥ. ಪುಸ್ತಕ ಎಂಬ ಪದವೂ ಪೊಸ್ತದಿಂದ ಬಂದಿರಬೇಕು. ಪ್ರಾಚೀನ ಕಾಲದಲ್ಲಿ ಬರವಣಿಗೆಗೆ ಒಂಟೆ ಅಥವಾ ಕತ್ತೆಯ ಚರ್ಮವನ್ನು ಬಳಸುತ್ತಿದ್ದರು. ಆದುದರಿಂದ ಕತ್ತೆಯ ಚರ್ಮದ ಮೇಲೆ ಬರೆದ ಈ ಬರವಣಿಗೆಗೆ ಖರಪೋಸ್ತ ಎಂಬ ಹೆಸರು ಬಂದು ಅದು ಕ್ರಮೇಣ ಖರೋಷ್ಠ, ಖರೋಷ್ಠಿ ಎಂದು ಆಗಿರಬೇಕೆಂಬುದು ಬಹುಜನಾಭಿಪ್ರಾಯ.

ಅರಾಮಿಯಿಕ್ ಲಿಪಿಗೂ ಖರೋಷ್ಠಿ ಲಿಪಿಗೂ ಬಹಳ ಸಾದೃಶ್ಯವಿದೆ. ಆದುದರಿಂದ ಖರೋಷ್ಠಿ ಲಿಪಿಯು ಅರಾಮಿಯಿಕ್ ಲಿಪಿಯಿಂದ ಜನ್ಯವಾಗಿರಬೇಕು. ಈ ಎರಡು ಲಿಪಿಗಳು ಭಾರತದ ವಾಯುವ್ಯ ಭಾಗದಲ್ಲಿ ಹೆಚ್ಚು ಬಳಕೆಯಲ್ಲಿರುವುದರಿಂದ ಇವುಗಳ ಸಂಬಂಧವು ಅತಿನಿಕಟವಾಗಿರುವುದು ಸಹಜವಾಗಿದೆ. ಪಂಜಾಬ್ ಮತ್ತು ವಾಯುವ್ಯ ಪ್ರಾಂತಗಳಲ್ಲಿ ಉಪಭಾಷೆಗಳ ಲೇಖನಕ್ಕೆ ಖರೋಷ್ಠಿಯನ್ನು ಉಪಯೋಗಿಸುತ್ತಿದ್ದರೂ ಇಂಡಿಯಾದಲ್ಲಿ ಅದು ಬೇರೂರಲಿಲ್ಲ. ಕ್ರಿ.ಶ. ಮೂರನೆಯ ಶತಮಾನದ ವೇಳೆಗೆ ಭಾರತದಲ್ಲಿ ಅದರ ಉಪಯೋಗ ನಿಂತುಹೋಗಿದೆ.

ಬ್ರಾಹ್ಮೀಲಿಪಿಯಾದರೋ ಇಲ್ಲಿಯವರೆಗೆ ಬೃಹದ್ಭಾರತದ ಅನೇಕ ಲಿಪಿಗಳನ್ನೊಳಗೊಂಡು ಭಾರತದ ಹಲವಾರು ಆಧುನಿಕ ಲಿಪಿಗಳ ಜನ್ಮದಾತೃವಾಗಿದೆ. ದೇವನಾಗರಿ, ಬಂಗಾಲಿ, ಅಸ್ಸಾಮಿ, ಮೈಥಿಲಿ, ಒರಿಯ, ಶಾರದ, ಗುರುಮುಖಿ, ಕೈಥಿ, ಗುಜರಾತಿ, ತೆಲುಗು, ಕನ್ನಡ, ತಮಿಳು, ಮಲೆಯಾಳ. ಗ್ರಂಥ ಮೊದಲಾದ ಲಿಪಿಗಳು ಇದರಿಂದಲೇ ಉದ್ಭವವಾಗಿವೆ.

ಹಿಂದೆಯೇ ತಿಳಿಸಿರುವಂತೆ ಇದರ ಚರಿತ್ರೆಯು ಎರಡು ಮೂರು ತಲೆಮಾರಿನ ಪಾಶ್ಚಾತ್ಯ ವಿದ್ವಾಂಸರ ಪರಿಶ್ರಮದಿಂದ ಲಭ್ಯವಾಗಿದೆ. ಇವರಲ್ಲಿ ಜೇಮ್ಸ್ ಪ್ರಿನ್ಸೆಪ್ ಎಂಬುವನು ಗ್ರೀಕ್ ದೊರೆಗಳ ದ್ವಿಭಾಷಾತ್ಮಕ ಲಿಪಿಯ ಸಹಾಯದಿಂದ ಬ್ರಾಹ್ಮಿಯನ್ನು ಗುರುತಿಸಿದನು. ಆ ಶಾಸನದಲ್ಲಿ ಗ್ರೀಕ್ ಭಾಷೆಯೂ ಪ್ರಾಕೃತ ಭಾಷೆಯೂ ಜೊತೆ ಜೊತೆಯಲ್ಲಿಯೇ ಲಿಖಿತವಾಗಿದ್ದಿತು. ಅವುಗಳ ತೋಲನ ಪ್ರಿನ್ಸೆಪ್ಪಿಗೆ ಬ್ರಾಹ್ಮೀ ಲಿಪಿಯನ್ನೂ ಓದಲು ಅವಕಾಶವನ್ನುಂಟುಮಾಡಿತು. ಇದರ ಫಲವಾಗಿ ಬ್ರಾಹ್ಮೀ ಲಿಪಿಯಲ್ಲಿದ್ದ ಅಶೋಕನ ಶಾಸನಗಳನ್ನು ಓದಿದಾಗ ಲಿಪಿ ಪ್ರಪಂಚದಲ್ಲಿ ಆತನು ಉದ್ದಾಮವಿಜಯವನ್ನು ಸಾಧಿಸಿದನು.

(ಮುಂದುವರಿಯುವುದು)

# ಮುಗ್ಗಿಯ ಮಾಯಿದೇವನ ಸ್ವರವಚನಗಳು

## ( ಒಂದು ಟಿಪ್ಪಣಿ )

—ಎಸ್. ಶಿವಣ್ಣ

ಐಪುರದ ಸೋಮನಾಥನ ಭಕ್ತ ಮುಗ್ಗಿಯ ಮಾಯಿದೇವ (ಸು. 1430) ವಿಜಯನಗರದ 'ಗಜವೇಂಟೆಕಾರ' ಇಮ್ಮಡಿ ಪ್ರೌಢದೇವರಾಯನ (ಕ್ರಿ.ಶ. 1424–1446) ಸಮಕಾಲೀನ. ಶಿವಾಗ್ರಮ ನಿಷ್ಣಾತ. ತಂದೆ ನಾಕರಾಜನ ಶಿಷ್ಯ ಸಂಗಮೇಶ್ವರ. ಕಲ್ಯಾಣದ ಎಂಬ ಹೆಸರೂ ಇದೆ. ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ಮುಗ್ಗಿಯ ಮಾಯಿದೇವ ಕೃತಿಗಳನ್ನು ರಚಿಸಿದ್ದಾನೆ. 'ಷಟ್ಸ್ಥಲ ಬ್ರಹ್ಮಿ' ಎಂಬ ಅಭಿದಾನಕ್ಕನುಗುಣವಾಗಿ ಈತನ ಕೃತಿಗಳಲ್ಲಿ ಧಾರ್ಮಿಕ ನಿರೂಪಣೆಗೆ ಹೆಚ್ಚಿನ ಮಹತ್ತ್ವ ಸಂದಿದೆ. ಇವನ ಕೃತಿಗಳಲ್ಲಿ ಐಪುರಿಯ ಸೋಮನಾಥನ ಉಲ್ಲೇಖವಿದೆ.

ರಾವ್‌ಬಹದ್ದೂರ್ ಆರ್. ನರಸಿಂಹಾಚಾರ್ಯರು ಕರ್ಣಾಟಕ ಕವಿಚರಿತೆ, ದ್ವಿತೀಯ ಸಂಪುಟ, (1919) ಪುಟ 70ರಲ್ಲಿ ಮುಗ್ಗಿಯ ಮಾಯಿದೇವನ ಈ ಕೆಳಕಂಡ ಕನ್ನಡ ಕೃತಿಗಳನ್ನು ಹೆಸರಿಸಿದ್ದಾರೆ.

೧) ಏಕೋತ್ತರ ಶತಸ್ಥಲ ಷಟ್ಪದಿ
೨) ಮುಗ್ಗಿಯ ಮಾಯಿದೇವ ವಚನ
೩) ಶತಕತ್ರಯ (ವೃತ್ತ)
೪) ಷಟ್ಸ್ಥಲ ಗದ್ಯ (ರಗಳೆ)

ಮೇಲಿನ ಕೃತಿಗಳಲ್ಲಿ ಎರಡನೆಯ ಕೃತಿಯ ಹೆಸರಲ್ಲದೆ ಮತ್ತಾವ ವಿವರಗಳೂ ಇಲ್ಲ.

ಕಂಬಾಳ ಶಾಂತ ಮಲ್ಲೇಶ (ಸು. 1600) ಗಣವಚನ ರತ್ನಾವಳಿ (ಗಣವ...) ಎಂಬ 216 ಸ್ಥಲಗಳನ್ನುಳ್ಳ ಸ್ವರವಚನ ಸಂಕಲನವನ್ನು ಸಂಕಲಿಸಿದ್ದಾನೆ. ಅದರಲ್ಲಿ ಉದಾಹೃತರಾದ ಕೃತಿಕಾರರನ್ನು (ಕೆಲವರನ್ನು) ಹೆಸರಿಸಿದ್ದಾನೆ. (ಕ.ಕ.ಚ. III 1929. 381.) ಅಲ್ಲಿ 'ಅಸಮ ಮಾಯಿಗದೇವ'ನೆಂದು ಮುಗ್ಗಿಯ ಮಾಯಿದೇವನನ್ನು ಉಲ್ಲೇಖಿಸಿದ್ದಾನೆ. ಗಣವ...ಯಲ್ಲಿ* ಮುಗ್ಗಿಯ ಮಾಯಿದೇವನ 3 ಸ್ವರವಚನಗಳಿವೆ. ಅವುಗಳ ಪಲ್ಲವಿ ಹಾಗೂ ಅಂಕಿತಗಳನ್ನು ಈ ಮುಂದೆ ಉಲ್ಲೇಖಿಸಿದೆ.

---

* ಈ ಅಮೂಲ್ಯವಾದ ಓಲೆ ಪ್ರತಿಯನ್ನು ನನ್ನ ಗಮನಕ್ಕೆ ತಂದು. ಬಳಸಿಕೊಳ್ಳಲು ಅನುಮತಿ ಇತ್ತ ಮಿತ್ರರಾದ ಪ್ರೊ॥ ಎಸ್. ಉಮಾಪತಿ (ದಾವಣಗೆರೆ) ಅವರಿಗೆ ಕೃತಜ್ಞನಾಗಿದ್ದೇನೆ.

(೧) (ಅಂ) ಐಪುರದ ಸೋಮನಾಥ. ರಾಗ–ಬವುಳಿ

ಲಿಂಗಾಂಗಿ ಅಂಗಸಹಭೋಗಿ ಲಿಂಗಪ್ರಾಣಿ
ಲಿಂಗತತ್ತ್ವಗ್ರಾಹಿ ಲಿಂಗವಂತ (5 ನುಡಿ)

(೨) (ಅಂ) ಐಪುರದ ಸೋಮೇಶ್ವರ. ರಾಗ–ಬವುಳಿ

ಲಿಂಗಾಂಗ ಸಂಯೋಗ ಸಹಜ ಸದುಬಕುತಿಯುಲಿ
ಕಾಣಲಿಬಹುದು ಸಾಕ್ಷಾದಾತ್ಮ ದೃಕ್ಕಿಗೆ (9 ನುಡಿ)

(೩) (ಅಂ) ಐಪುರ ಸೋಮೇಶ್ವರ. ರಾಗ–ಶಂಕರಾಭರಣ

ಲಿಂಗದ ಸದುಭಾವವ ತಿಳಿದಾ
ಸಂಗವೆ ಲಿಂಗೈಕ್ಯದ ನಿಜವು (5 ನುಡಿ)

ಇವಲ್ಲದೆ ಇನ್ನೂ ಎರಡು ಸ್ವರವಚನಗಳು ಉಪಲಬ್ಧವಿದ್ದು ಅವುಗಳ ಪಲ್ಲವಿ ಹೀಗಿದೆ—

(೪) (ಅಂ) ಐಪುರ ಸೋಮೇಶ ಲಿಂಗ

ಬೊಮ್ಮವನರಿದೆನೆಂಬರಿವು ತಾನರಿವಲ್ಲ
ಬೊಮ್ಮ ಜ್ಞಾನದ ಮಾತಲ್ಲ ಹೋಗೆಲವೋ (9 ನುಡಿ)

(೫) (ಅಂ) ಐಪುರದ ಸೋಮ

ಲಿಂಗದೇಹಿ ಲಿಂಗಪ್ರಾಣಿ
ಲಿಂಗ ಭೋಗೋಪಭೋಗಿ
ಲಿಂಗತತ್ತ್ವ ಪರಿಗ್ರಾಹಿ
ಲಿಂಗಮೂರುತಿ ಸಹಜ ಲಿಂಗವಂತ

ಇವುಗಳಲ್ಲಿ 2ನೆಯ ಸ್ವರವಚನ ಡಾ॥ ವೀರಣ್ಣ ರಾಜೂರ ಅವರಿಂದ 'ತರಳಬಾಳು' 3-4-1978, ಪುಟ 37–8ರಲ್ಲಿ ಅಚ್ಚಾಗಿದೆ. ಹೀಗೆಯೇ ಐದನೆಯ ಸ್ವರವಚನ ಶ್ರೀ। ಷ. ಬ್ರ. ಸಿದ್ಧರಾಮ ಶಿವಾಚಾರ್ಯರು (ಯಲಬುರ್ಗಾ) ಸಂಪಾದಿಸಿರುವ 'ಬಸವಾದಿ ಪ್ರಮಥರ ಪದಗಳು', ಭಾಗ–2, 1977, ಪುಟ 9–10ರಲ್ಲಿ ಪ್ರಕಟವಾಗಿದೆ.

ಉಳಿದ ಮೂರು ಸ್ವರವಚನಗಳಲ್ಲಿ ಗಣವ......ದಲ್ಲಿ ಲಭಿಸುವ ಅಪ್ರಕಟಿತ ಒಂದು ಮತ್ತು ಮೂರನೆಯ ಸ್ವರವಚನಗಳನ್ನು ಪುಟ ೧–೨ರಲ್ಲಿ ಕೊಟ್ಟಿದೆ.

# ಛಂದೋದರ್ಪಣ—ಒಂದು ಸಮೀಕ್ಷೆ

ಕನ್ನಡ ಸಾಹಿತ್ಯದಲ್ಲಿ ಶಾಸ್ತ್ರಗ್ರಂಥಗಳು ವಿರಳ. ಶಾಸ್ತ್ರಗ್ರಂಥಗಳ ಅಧ್ಯಯನಕ್ಕೆ ಕನ್ನಡಿಗರಿಗೆ ಒಲವು ಕಡಿಮೆಯಾಗಿರುವುದೇ ಇದಕ್ಕೆ ಕಾರಣ ಎಂದರೆ ತಪ್ಪಾಗಲಾರದು. ಸಾಮಾನ್ಯವಾಗಿ ಲಕ್ಷಣಗ್ರಂಥಗಳೆಂದರೇ ತಲೆನೋವಿನ ಪ್ರಸಂಗ. ಅದರಲ್ಲೂ ಛಂದಶ್ಶಾಸ್ತ್ರಗ್ರಂಥವೆಂದರೆ ಅದರ ಕಡೆ ಗಮನಹರಿಸುವವರು ಅತ್ಯಂತ ಕಡಿಮೆ. ಶಾಲೆಗಳಲ್ಲಿ ಪಠ್ಯಪುಸ್ತಕವಾಗಿದ್ದರೆ ಮಾತ್ರ ಪಾಠಕರಿಗೆ ಅತ್ತ ಗಮನ. ವಿದ್ಯಾರ್ಥಿಗಳಿಗಂತೂ ಅದು ಒಲ್ಲದ ಊಟವಾಗಿದೆ. ಹೀಗಾಗಿ ಛಂದಶ್ಶಾಸ್ತ್ರಕ್ಕೆ ಸಂಬಂಧಪಟ್ಟ ಗ್ರಂಥರಚನೆಯತ್ತ ಪ್ರವೃತ್ತಿಯೇ ಇಲ್ಲದಂತಾಗಿ ಹೊಸದಾಗಿ ಈ ಶಾಸ್ತ್ರಗ್ರಂಥದ ರಚನೆ ಬಹುಕಾಲದಿಂದಲೂ ಆಗಿರುವುದಿಲ್ಲ. ಆಧುನಿಕ ಕನ್ನಡ ಕವಿಗಳು ಕಾಲಕಾಲಕ್ಕೆ ಅನ್ಯಭಾಷೆಗಳ ಸಂಪರ್ಕದಿಂದ ಕನ್ನಡ ಛಂದಸ್ಸಿನಲ್ಲಿ ಹಲವಾರು ಮಾರ್ಪಾಡುಗಳನ್ನು ಮಾಡಿ ಕವನಗಳನ್ನು ರಚಿಸಿರುತ್ತಾರೆ. ಈ ಛಂದಸ್ಸುಗಳ ವೈವಿಧ್ಯಗಳನ್ನು ಒಳಗೊಂಡಂತೆ ಕನ್ನಡ ಸಾಹಿತ್ಯದಲ್ಲಿ ಸಮಗ್ರವಾದ ಛಂದಶ್ಶಾಸ್ತ್ರ ಗ್ರಂಥದ ಆವಶ್ಯಕತೆಯ ಸಮಯವರಿತು ಈ 'ಛಂದೋದರ್ಪಣ' ಗ್ರಂಥ ಪ್ರಕಾಶಕ್ಕೆ ಬಂದಿದೆ.

ಶಿಶಿಲಾಪುರ ನಿವಾಸಿಗಳಾದ ಶ್ರೀ ಅನಂತ ಕೆದಿಲ್ಲಾಯ ಮತ್ತು ಸೌ॥ ಲಕ್ಷ್ಮೀ ಈ ದಂಪತಿಗಳ ಪುತ್ರ ಶ್ರೀ ಕ. ಪು. ಸೀತಾರಾಮ ಕೆದಿಲ್ಲಾಯ ಈ ಗ್ರಂಥದ ಕರ್ತೃ. "ಇವರು ಶ್ರೀ ಶಿಶಿಲೇಶ್ವರ ದೇವರ ಭಕ್ತರಾಗಿ ಮಲೆನಾಡಿನ ಹಳ್ಳಿಯಾದ ಶಿಶಿಲದಲ್ಲಿ ಕೃಷಿಜೀವನ ನಡೆಸುತ್ತಿರುವ ಪ್ರತಿಭಾವಂತ ಕವಿ" ಎಂದು ಈ ಗ್ರಂಥದ ಪ್ರಕಾಶಕರು ತಿಳಿಸಿರುತ್ತಾರೆ. ಈ ಕೃಷೀವಲರು ಛಂದಸ್ಸಿನ ಕ್ಷೇತ್ರದಲ್ಲಿ ಕೃಷಿಮಾಡಿ ಈ 'ಛಂದೋದರ್ಪಣ' ಎಂಬ ಫಲವನ್ನು ಹೊರತಂದಿದ್ದಾರೆ. ಈ ಗ್ರಂಥದಲ್ಲಿ ಎಂಟು ಅಧ್ಯಾಯಗಳಿವೆ. (೧) ಸಂಜ್ಞಾಪ್ರಕರಣ [ಪದ್ಯಸಂಖ್ಯೆ ೬೬], (೨) ಸಮವೃತ್ತ ಪ್ರಕರಣ [ಪ. ಸಂ. ೧೯೩]. (೩) ಅರ್ಧಸಮವೃತ್ತ, ವಿಷಮವೃತ್ತ, ಉಪಜಾತಿ ವೃತ್ತ, ಅನುಷ್ಟುಪ್ ಶ್ಲೋಕ ಪ್ರಕರಣ [ಪ. ಸಂ. ೬೫] (೪) ವೈತಾಳೀಯ ಮಾತ್ರಾ ಸಮಕ ಪ್ರಕರಣ [ಪ.ಸಂ. ೪೪] (೫) ಆರ್ಯಾದಿ ಜಾತಿ ಪ್ರಕರಣ [೭೫] (೬) ಕರ್ಣಾಟಕ ವಿಷಯ ಜಾತಿ ಪ್ರಕರಣ [ಪ.ಸಂ. ೪೨] (೭) ಷಟ್ಪದೀ ಚತುಷ್ಪದೀ ಪ್ರಕರಣ [ಪ. ಸಂ. ೧೦೮] (೮) ಷಟ್ಪ್ರತ್ಯಯ ಪ್ರಕರಣ [ಪ.ಸಂ. ೪೫]. ಹೀಗೆ ಎಂಟು ಪ್ರಕರಣ

---

ಬರೆದವರು : ಕ. ಪು. ಸೀತಾರಾಮ ಕೆದಿಲ್ಲಾಯ, ಶಿಶಿಲ; ಪುಟಗಳು : ೧೯೭ + ೮. ಕಿರೀಟ–ಅಷ್ಟದಳ ; ಪ್ರಥಮ ಮುದ್ರಣ : ೧೯೮೫ ; ಪ್ರಕಾಶಕರು : ಭಾರದ್ವಾಜ ಪ್ರಕಾಶನ, ಕದಿರೆ, ಮಂಗಳೂರು–575002 ; ಬೆಲೆ : ೧೮ ರೂ.

ಗಳಲ್ಲಿ ಒಟ್ಟು ೬೩೮ ಪದ್ಯಗಳು ಮತ್ತು ಕೆಲವುಗಳಿಂದ ಕನ್ನಡ ಛಂದಸ್ಸಿಗೆ ಸಂಬಂಧ ಪಟ್ಟ ಪ್ರಸಿದ್ಧ ಛಂದಸ್ಸಿನ ಲಕ್ಷಣಗಳನ್ನು ಆಯಾ ಛಂದಸ್ಸಿನ ಲಕ್ಷ್ಯರೂಪವಾದ ಪದ್ಯ ದಿಂದಲೇ ಬಹುಮಟ್ಟಿಗೆ ನಿರೂಪಿಸಿರುತ್ತಾರೆ.

"ಹಿಂದಿ, ಮರಾಠಿ ಮುಂತಾದ ಅರ್ವಾಚೀನ ಭಾಷೆಗಳಲ್ಲಿ ಪುರಾತನ ನೂತನ ಛಂದೋಬಂಧಗಳ ಲಕ್ಷಣವನ್ನು ನಿರೂಪಿಸುವ ಛಂದಶ್ಶಾಸ್ತ್ರಗಳನ್ನು ಆಧುನಿಕ ಕವಿ ಗಳು ನಿರ್ಮಿಸಿರುವರು. ಆದರೆ ಕನ್ನಡದಲ್ಲಿ ಯಾರೂ ನವೀನ ಛಂದೋಗ್ರಂಥವನ್ನು ರಚಿಸಿರಲಿಲ್ಲ. ಆದುದರಿಂದ ನಾನು ಈ ಛಂದೋದರ್ಪಣವನ್ನು ಬರೆಯಲು ಕಾರಣ ವಾಯಿತು" ಎಂದು ಗ್ರಂಥಕರ್ತೃವೇ ಪ್ರಸ್ತಾವನೆಯಲ್ಲಿ ಈ ಗ್ರಂಥದ ಆವಿರ್ಭಾವಕ್ಕೆ ಕಾರಣವನ್ನು ತಿಳಿಸಿರುತ್ತಾರೆ.

ಅಂತೆಯೇ "ಹಿಂದೆ ಪ್ರಕಟವಾಗಿರುವ ಕನ್ನಡ-ಸಂಸ್ಕೃತ-ಪ್ರಾಕೃತ-ತೆಲುಗು-ಮಲೆಯಾಳ-ಹಿಂದಿ ಇತ್ಯಾದಿ ಭಾಷೆಗಳ ಛಂದಶ್ಶಾಸ್ತ್ರಗಳು ಈ ಕೃತಿಗೆ ಆಧಾರ ಗ್ರಂಥ ಗಳಾಗಿವೆ. ಇವುಗಳಿಂದ ಕನ್ನಡಕ್ಕೆ ಅವಶ್ಯವಾದ ಛಂದೋವಿಷಯಗಳನ್ನು ಪರಿಗ್ರಹಿಸಿ, ಇವುಗಳಲ್ಲಿ ಉಕ್ತವಾಗದ ಕೆಲವು ವಿಶಿಷ್ಟ ವಿಚಾರಗಳನ್ನು ಸೇರಿಸಿ ಲಕ್ಷ್ಯಲಕ್ಷಣ ಸಮವಾಯ ಪದ್ಧತಿಯಲ್ಲಿ ಈ ಛಂದೋಗ್ರಂಥವನ್ನು ವಿರಚಿಸಿರುವೆನು.

"ಈ ಕೃತಿಯಲ್ಲಿ ಕೆಲವು ನೂತನ ಛಂದೋಬಂಧಗಳಿಗೆ ನಾನೇ ಕಲ್ಪಿಸಿಕೊಟ್ಟ ನಾಮಧೇಯಗಳ ಕುರಿತು ವಿವರಿಸುವ ಅವಶ್ಯವಿದೆ. ನಾಗವರ್ಮನ ಛಂದೋಂಬುಧಿ, ಜಯಕೀರ್ತಿಯ ಛಂದೋಽನುಶಾಸನಗಳಲ್ಲಿ ಕರ್ಣಾಟಕ ವಿಷಯ ಜಾತಿಗೆ ಸೇರಿದ ಗೀತಿಕೆಯ ಒಂದು ರೂಪವನ್ನು ಮಾತ್ರವೇ ಉಲ್ಲೇಖಿಸಲಾಗಿದೆ. ಆದರೆ ಕವಿರಾಜಮಾರ್ಗಾದಿ ಗ್ರಂಥಗಳಲ್ಲಿ ವಿಭಿನ್ನ ಲಕ್ಷಣದ ಗೀತಿಕೆಗಳು ಕಂಡುಬರುವುದರಿಂದ ಗೀತಿಕೆ-ಸಮಗೀತಿಕೆ -ವಿಷಮ ಗೀತಿಕೆಗಳೆಂಬ ಮೂರು ಪ್ರಭೇದಗಳನ್ನು ಕಲ್ಪಿಸಬೇಕಾಯಿತು. ಹಿಂದಿನ ಛಂದೋಗ್ರಂಥಗಳಲ್ಲಿ ಇಲ್ಲದ ಅಂಶಿಗಣಬದ್ಧ ಗೀತೆಗಳಿಗೆ ಬೇರೆ ಬೇರೆ ಹೆಸರಿಟ್ಟು ಲಕ್ಷಣವನ್ನು ನಿರೂಪಿಸಬೇಕಾಯಿತು.

"ಕನ್ನಡದಲ್ಲಿ ಈಗ ಮಾತ್ರಾಗಣ ಬದ್ಧ ಚತುಷ್ಪದಿಗಳು ಬಹಳ ಪ್ರಚಾರದಲ್ಲಿವೆ. ಪ್ರಾಕೃತ, ಹಿಂದಿ ಇತ್ಯಾದಿ ಭಾಷೆಗಳಲ್ಲಿಯೂ ವಿವಿಧ ರೀತಿಯ ಮಾತ್ರಾ ಚತುಷ್ಪದಿ ಗಳು ಪ್ರಯೋಗಗೊಂಡಿವೆ. ಆದರೆ ಇವುಗಳಲ್ಲಿ ಕನ್ನಡದ ಮಾತ್ರಾಬಂಧಗಳಂತೆ ತಾಳಲಯಬದ್ಧವಾದ ಗಣವಿನ್ಯಾಸವಿರುವ ಕೆಲವು ಚತುಷ್ಪದಿಗಳು ಮಾತ್ರ ಲಭಿಸು ವುವು. ಆದುದರಿಂದ ಅವುಗಳ ನಾಮಧೇಯಗಳನ್ನು ಕೆಲವು ಪದ್ಯಗಳಿಗಿಟ್ಟು ಇತರ ಅನೇಕ ಚತುಷ್ಪದಿಗಳಿಗೆ ಬೇರೆ ಹೆಸರುಗಳನ್ನು ಸೂಚಿಸಬೇಕಾಯಿತು. ಕನ್ನಡದ ಪೂರ್ವ ಕವಿಗಳು ಉತ್ಸಾಹ-ಮಂದಾನಿಲ-ಲಲಿತ ಇತ್ಯಾದಿ ಸಮವೃತ್ತಗಳ ಅಂಕಿತ-ನಾಮಗಳನ್ನು ಅದೇ ಛಂದೋಲಯವಿರುವ ರಗಳೆಗಳಿಗೂ ಮಾತ್ರಾಚತುಷ್ಪದಿ ಗಳಿಗೂ ಪ್ರಯೋಗಿಸಿದ ಕ್ರಮವನ್ನು ಅನುಸರಿಸಿ ಸಮವೃತ್ತಗಳ ಹೆಸರುಗಳನ್ನು ಹಲವು ಸಮಚತುಷ್ಪದಿಗಳಿಗೆ ಕೊಟ್ಟಿರುವೆನು. ಆದರೆ ಕನ್ನಡದ ಅರ್ಧ ಸಮ-ವಿಷಮ

ಚತುಷ್ಪದಿಗಳಿಗೆ ಸಮಾನವಾದ ಪದ್ಯಗಳು ಬೇರೆ ಭಾಷೆಗಳಲ್ಲಿ ಕಂಡುಬರುವುದಿಲ್ಲ. ತಾಳಲಯ ಬದ್ಧವಾದ ಈ ಗೀತೆಗಳಿಗೆ ತಾಳಾನುಗುಣವಾದ ಅಭಿಧಾನವಿಟ್ಟಿರುವೆನು" ಎಂದು ತಮ್ಮ ಈ ಗ್ರಂಥಕ್ಕೆ ಆಧಾರ ಗ್ರಂಥಗಳ ವಿವರ, ಈ ಕೃತಿಯಲ್ಲಿ ತಾವು ಮಾಡಿರುವ ಮಾರ್ಪಾಡುಗಳು ಮತ್ತು ಹೊಸದಾಗಿ ಸೇರಿಸಿರುವ ಛಂದಸ್ಸಿನ ವಿವರಗಳ ಪರಿಚಯವನ್ನು ಗ್ರಂಥಕರ್ತೃವೇ ಪ್ರಸ್ತಾವನೆಯಲ್ಲಿ ತಿಳಿಸಿರುತ್ತಾರೆ. ಗ್ರಂಥಾರಂಭದಲ್ಲಿ ತಮ್ಮ ಗುರುಗಳನ್ನಾಗಲೀ ಛಂದಶ್ಶಾಸ್ತ್ರಕ್ಕೆ ಸಂಬಂಧಪಟ್ಟ ಪೂರ್ವಕವಿಗಳನ್ನಾಗಲೀ ಸ್ಮರಿಸಿಲ್ಲ. ಆರಂಭದ ಪದ್ಯ ಕುಲದೇವರಾದ ಶಿಶಿಲೇಶ್ವರ ಪ್ರಾರ್ಥನೆ. ಎರಡನೆಯ ಪದ್ಯದಲ್ಲಿ ಸರಸ್ವತಿಯ ಸ್ತುತಿ. ಮೂರನೆಯ ಪದ್ಯದಲ್ಲಿ ಗ್ರಂಥರಚನೆಯ ಪ್ರತಿಜ್ಞೆ. ನಾಲ್ಕನೆಯ ಪದ್ಯದಿಂದ ಗ್ರಂಥ ಪ್ರಾರಂಭವಾಗಿದೆ. ಕ್ರಮವಾಗಿ ೯ ಪದ್ಯಗಳಲ್ಲಿ ಗುರು ಲಘು ಪ್ಲುತ ವಿವರ, ೫ ಪದ್ಯಗಳಲ್ಲಿ ಶಿಥಿಲದ್ವಿತ್ವವಿಚಾರ, ೫ ಪದ್ಯಗಳಲ್ಲಿ ಅಕ್ಷರಗಣ ಪ್ರಸ್ತಾರ, ೨ ಪದ್ಯಗಳಲ್ಲಿ ೬ ಮಾತ್ರಾಗಣದಿಂದ ೨ ಮಾತ್ರಾಗಣದವರೆಗಿನ ಪ್ರಸ್ತಾರ (ಇದಕ್ಕೆ ಹೊಸದಾಗಿ ಟ, ಠ, ಡ, ಢ, ಣ ಎಂಬ ಸಂಕೇತ ಕೊಟ್ಟಿದೆ) ೪ ಪದ್ಯಗಳಲ್ಲಿ ಅಂಶಗಣ ವಿಚಾರ, ಗದ್ಯದಲ್ಲಿ ಇದರ ಪ್ರಸ್ತಾರ ಮತ್ತು ಸಂಖ್ಯಾವಾಚಕ ಪದಗಳ ವಿವರ, ೪ ಪದ್ಯಗಳಲ್ಲಿ ಯತಿ ವಿಚಾರ, ೩೨ ಪದ್ಯಗಳಲ್ಲಿ ಆದಿಪ್ರಾಸ, ಸಿಂಹಗಜಾದಿ ಪ್ರಾಸ, ಪ್ರಾಸಾಭಾಸ ಇವುಗಳ ವಿವರವಿದ್ದು ಮೊದಲನೆಯ ಅಧ್ಯಾಯ ಮುಗಿದಿದೆ.

ಎರಡನೆಯ ಅಧ್ಯಾಯದಲ್ಲಿ ಕ್ರಮವಾಗಿ (೧ ರಿಂದ ೧೯೩ ಪದ್ಯಗಳಲ್ಲಿ) ಸಮವೃತ್ತ ಪ್ರಕರಣದಲ್ಲಿ ಉಕ್ತೆಯಿಂದ ಮೊದಲು ಮಾಡಿ ಉತ್ಕೃತಿವರೆಗಿನ ಛಂದೋಪ್ರಭೇದಗಳು, ೧೯೪ ರಿಂದ ೨೦೧ ಪದ್ಯಗಳಲ್ಲಿ ೨೬ ಅಕ್ಷರಗಳಿಗಿಂತ ಅಧಿಕಾಕ್ಷರಗಳಿಂದ ಕೂಡಿದ ಮಾಲಾವೃತ್ತ ಪ್ರಭೇದಗಳು, ೨೦೨ ರಿಂದ ೨೦೪ ಪದ್ಯ ಪೂರ್ತಿ ದಂಡಕ ಛಂದಸ್ಸಿನ ವಿವರವಿದ್ದು ಅಧ್ಯಾಯ ಮುಗಿದಿದೆ. (ಛಂದೋಂಬುಧಿಯಲ್ಲಿ ಮಾಲಾವೃತ್ತ ಮತ್ತು ದಂಡಕಗಳ ವಿವರ ಮೂರನೆಯ ಅಧಿಕಾರದಲ್ಲಿದೆ.)

ಮೂರನೆಯ ಅಧ್ಯಾಯದ ಮೊದಲ ೩೦ ಪದ್ಯಗಳಲ್ಲಿ ಅರ್ಧಸಮವೃತ್ತಲಕ್ಷಣವಿದೆ. ಬಳಿಕ ಕ್ರಮವಾಗಿ ೪೪ನೆಯ ಪದ್ಯದವರೆಗೆ ವಿಷಮ ವೃತ್ತಗಳ ವಿವರ, ೬೩ ಪದ್ಯ ಪೂರ್ತಿ ಅನುಷ್ಟುಪ್ ಶ್ಲೋಕ ಛಂದಸ್ಸಿನ ವಿವರ. ೬೪–೬೫ನೆಯ ಪದ್ಯಗಳಲ್ಲಿ ಜಾತಿ–ವಿಜಾತಿ ಗಾಥೆಯ ವಿವರದೊಡನೆ ಅಧ್ಯಾಯ ಕೊನೆಗೊಂಡಿದೆ.

ನಾಲ್ಕನೆಯ ಅಧ್ಯಾಯದಲ್ಲಿ ವೈತಾಳೀಯ ಪ್ರಕರಣ ೨೯ ಪದ್ಯಗಳಲ್ಲಿದ್ದು ಬಳಿಕ ೩೦ ರಿಂದ ೩೮ ಪದ್ಯಪೂರ್ತಿ ಮಾತ್ರಾಸಮಕ ಛಂದಸ್ಸು, ೩೯-೪೦-೪೧ನೆಯ ಪದ್ಯಗಳಲ್ಲಿ ಅನಂಗ ಕ್ರೀಡಾ ಭೇದದ ವಿವರವಿದ್ದು ಅಧ್ಯಾಯ ಮುಗಿದಿದೆ.

ಐದನೆಯ ಅಧ್ಯಾಯದಲ್ಲಿ ಆರ್ಯಾ, ಸ್ಕಂದ, ಸಂಕೀರ್ಣಸ್ಕಂದ, ಉತ್ಸಾಹ ಪ್ರಕರಣ, ಲಯೋತ್ತರ ಪ್ರಕರಣ, ಮಾತ್ರಾದಂಡ ಪ್ರಕರಣ, ರಘಟಾಬಂಧ ಪ್ರಕರಣಗಳಲ್ಲಿ ಆರ್ಯಾಛಂದಸ್ಸಿನ ಲಕ್ಷಣದ ವಿವರ ಒಟ್ಟು ೬೫ ಪದ್ಯಗಳಲ್ಲಿ ಉಕ್ತವಾಗಿದೆ.

ಆರನೆಯ ಅಧ್ಯಾಯದಲ್ಲಿ ಕರ್ಣಾಟಕ ವಿಷಮ ಜಾತಿ ಪ್ರಕರಣ, ಗೀತಿಪ್ರಕರಣ, ಆಂಧ್ರವಿಷಯ ಜಾತಿ ಪ್ರಕರಣಗಳಿದ್ದು ೪೨ ಪದ್ಯಗಳಲ್ಲಿ ಛಂದಸ್ಸಿನ ವಿವರವಿದೆ.

ಏಳನೆಯ ಅಧ್ಯಾಯದಲ್ಲಿ ಷಟ್ಪದೀ ಪ್ರಕರಣ, ಗಣಸಮಚತುಷ್ಪದೀ ಪ್ರಕರಣ, ಅರ್ಧಸಮಚತುಷ್ಪದೀ ಪ್ರಕರಣ, ವಿಷಮ ಚತುಷ್ಪದೀ ಪ್ರಕರಣಗಳು ೧೦೮ ಪದ್ಯಗಳಲ್ಲಿ ವಿವೃತವಾಗಿದೆ.

ಕೊನೆಯದಾದ ಎಂಟನೆಯ ಅಧ್ಯಾಯದಲ್ಲಿ ಸಮವೃತ್ತ ಪ್ರಸ್ತಾರವಿಧಿ, ಅತ್ಯುಕ್ತ ಛಂದೋವರ್ಗದ ವಿಧಿಪ್ರಸ್ತಾರ, ವಿಷಮವೃತ್ತಪ್ರಸ್ತಾರ ವಿಧಿ, ಮಾತ್ರಾಗಣ ಪ್ರಸ್ತಾರ, ಗುರುಲಘು ಜ್ಞಾನೋಪಾಯ ಮಾತ್ರಾಪಿಂಡ, ಅಂಶಿಗಣ ಪ್ರಸ್ತಾರ, ಅಂಶಿಗಣ ಸಂಖ್ಯಾನಿರ್ಣಯ ಇವುಗಳ ವಿವರ ೪೪ ಪದ್ಯಗಳಲ್ಲಿದ್ದು ೪೫ನೆಯ ಪದ್ಯದಲ್ಲಿ ವಂಶಕೀರ್ತನೆ, ೪೬ನೆಯ ಪದ್ಯದಲ್ಲಿ ಅಂತ್ಯ ಮಂಗಳದೊಡನೆ ಗ್ರಂಥ ಪೂರ್ಣವಾಗಿದೆ.

ಇಷ್ಟು ವಿಷಯಗಳನ್ನೊಳಗೊಂಡ ಈ ಗ್ರಂಥ ಕನ್ನಡ ಸಾಹಿತಿಗಳಿಗೆ ಅತ್ಯುಪಯುಕ್ತವಾಗಿದ್ದು ಆದರಣೀಯವಾಗಿದೆ.

ಷಟ್ಪದೀ ಛಂದಸ್ಸಿನ ವಿವರಣೆಯಲ್ಲಿ "ಉದ್ದಂಡ ಷಟ್ಪದಿ"ಯ ಬಗ್ಗೆ ನಿಷ್ಕೃಷ್ಟವಾದ ಲಕ್ಷಣವನ್ನು ಬರೆಯುವುದಕ್ಕೆ ಮೊದಲು, ಪ್ರಬುದ್ಧ ಕರ್ಣಾಟಕ ಸಂಪುಟ ೪೯, ಸಂಚಿಕೆ ೨ರಲ್ಲಿ ಪ್ರಕಟವಾಗಿರುವ "ಉದ್ದಂಡ ಷಟ್ಪದಿಯ ಎರಡು ಮುಖಗಳು" ಎಂಬ ಲೇಖನ ಗ್ರಂಥಕರ್ತೃವಿನ ದೃಷ್ಟಿಗೆ ಬಿದ್ದಿರಲಾರದು. ಅದರಂತೆ ಅಲ್ಲಿ ವಾರ್ಧಕ ಷಟ್ಪದಿಗೆ ಉದ್ದಂಡ ಷಟ್ಪದಿ ಎಂಬ ಹೆಸರಿರುವ ಪದ್ಯ ಉದಾಹೃತವಾಗಿದೆ. ಈ ಗ್ರಂಥದಲ್ಲಿ ಕೊಟ್ಟಿರುವ ಲಕ್ಷಣ ಆ ಪದ್ಯಗಳಿಗೆ ಸರಿಹೊಂದುವುದಿಲ್ಲ. ಅಲ್ಲದೆ ಈ ಷಟ್ಪದಿಯಲ್ಲಿ ಎರಡು ಮಾತ್ರೆಗಳ ಗಣ ಎಂದು ವಿಭಾಗ ಮಾಡುವುದಕ್ಕಿಂತ ೬ ಮಾತ್ರೆಗಳ ಗಣವನ್ನು ಸ್ವೀಕರಿಸುವುದರಿಂದ ಯಾವ ನ್ಯೂನತೆಯೂ ಇರುವುದಿಲ್ಲ ಎನ್ನುವುದು ಸ್ಪಷ್ಟಪಡುತ್ತದೆ.

ಛಂದಸ್ಸಿನ ಸಮಗ್ರವಾದ ವಿವರಗಳನ್ನೊಳಗೊಂಡ ಈ ಕೃತಿಗೆ ವಿಷಯಸೂಚಿ ಇಲ್ಲದಿರುವುದು ಒಂದು ಕೊರತೆ. ಮುದ್ರಣ ವಿನ್ಯಾಸಗಳು ಸಮರ್ಪಕವಾಗಿವೆ. ಆದರೂ ಮುದ್ರಾರಾಕ್ಷಸನ ಹಾವಳಿ ಈ ಕೃತಿಯಲ್ಲೂ ತಪ್ಪಿಲ್ಲ. ಕೆಲವನ್ನು ಗ್ರಂಥಕರ್ತರೇ ಗಮನಿಸಿರುವಂತಿದೆ. ಆದರೂ ಶುದ್ಧಾಶುದ್ಧ ಕೊಟ್ಟಿಲ್ಲ, ಮುಂದಿನ ಮುದ್ರಣ ಈ ಕೊರತೆಗಳಿಲ್ಲದಂತಾಗಲಿ ಎನ್ನುವುದು ನಮ್ಮ ಆಶಯ.

ಕನ್ನಡ ಸಾಹಿತ್ಯದ ಕ್ಷೇತ್ರದಲ್ಲಿ ಈ ಕೃತಿ ಪ್ರಸಿದ್ಧಿಗೆ ಬಂದಲ್ಲಿ ಗ್ರಂಥಕರ್ತೃವಿನ ಶ್ರಮ ಸಾರ್ಥಕವಾಗುತ್ತದೆ. ಕನ್ನಡ ಅಭಿಮಾನಿಗಳ ಪ್ರೋತ್ಸಾಹದಿಂದ ಈ ಕೃತಿ ಮತ್ತೊಂದು ಮುದ್ರಣ ಕಾಣುವಂತಾದರೆ ಉತ್ಸಾಹಿಗಳಾದ ಈ ಕರ್ತೃವಿಂದ ಇನ್ನೂ ಹೊಸ ಹೊಸ ಕೃತಿಗಳು ಬೆಳಕು ಕಾಣುವಂತಾಗುತ್ತದೆ.

—ನ. ಕೃಷ್ಣ ಜೋಯಿಸ್

# ಹವ್ಯಾಸ ಲೇಖನಗಳು

ಈ ಲೇಖನಸಂಕಲನದಲ್ಲಿ ಒಟ್ಟು ಆರು ಲೇಖನಗಳಿವೆ. ಇವುಗಳಲ್ಲಿ ಒಟ್ಟು ಐದು ಲೇಖನಗಳು ಕವಿರಾಜಮಾರ್ಗದ ವಿವಿಧ ಪ್ರಸಂಗಗಳ ವಿಶ್ಲೇಷಣೆ, ಮತ್ತು ಕೊನೆಯದಾದ ಮಹಾಭಾರತದಲ್ಲಿ ಮಹಿಳೆ ಮತ್ತು ಮಹಾಭಾರತ ಯುದ್ಧ ಮತ್ತು ಮಹಿಳೆ ಎಂಬುವು ಸಂಸ್ಕೃತ ಪತ್ರಿಕೆಯೊಂದರಲ್ಲಿ ಮುದ್ರಿತವಾದ ಸಂಸ್ಕೃತ ಮೂಲದ ಕನ್ನಡ ಅನುವಾದ.

ಲೇಖಕರು ತಮ್ಮ ಮೊದಲ ಮಾತಿನಲ್ಲಿ, "ಹವ್ಯಾಸಕ್ಕೆ ಬರೆದ ಲಘು ಲೇಖನಗಳು......ಇವು ಕುರಿತೋದಿ ಬರೆದ ಲೇಖನಗಳೇನೂ ಅಲ್ಲ. ಸಾಮಾನ್ಯ ಓದುಗನೊಬ್ಬನ ಸಾಮಾನ್ಯ ಅನಿಸಿಕೆಗಳು ಮಾತ್ರ" ಎಂದಿದ್ದಾರೆ. ಆದರೆ, ಗ್ರಂಥವನ್ನೊಮ್ಮೆ ಓದಿದಾಗ, ಲೇಖಕರ ಈ ಮಾತುಗಳು ಅವರ ವಿನಯಸೂಚಕವಾಗಿ ಕಂಡುಬರುತ್ತವೆ.

ಹೆಚ್ಚಿನ ಲೇಖನಗಳು ಕವಿರಾಜಮಾರ್ಗಕ್ಕೆ ಸಂಬಂಧಿಸಿದವು. ಧ್ವನಿ ಸಿದ್ಧಾಂತದ ವಿಷಯದಲ್ಲಿ ಮಾರ್ಗಕಾರನ ನಿಲುವು ಮೊದಲನೆಯ ಲೇಖನ. "ಧ್ವನಿಯೆಂಬುದಳಂಕಾರಂ......" ಎಂಬ ಮಾರ್ಗಕಾರನ ಪದವನ್ನು ವಿಶ್ಲೇಷಿಸಿದ್ದಾರೆ. ಈ ಪದ್ಯದ ಮೇಲಿನ ಇತರರ ವ್ಯಾಖ್ಯಾನಗಳನ್ನೂ ವಿದ್ವತ್ಪೂರ್ಣವಾಗಿ ವಿಶ್ಲೇಷಿಸಿದ್ದಾರೆ. ಮಾರ್ಗಕಾರನು ಕೊಟ್ಟಿರುವ ಉದಾಹರಣೆಯು ಅತಿಶಯೋಕ್ತಿ ಅಲಂಕಾರವೆಂದು ಅಭಿಪ್ರಾಯಪಡುತ್ತಾರೆ. ಧ್ವನಿಕಾರನಿಗಿಂತ ಹಿಂದೆಯೇ ಧ್ವನಿಯೆಂಬುದು ಪ್ರಚಲಿತವಾಗಿತ್ತೆಂದು ಆನಂದವರ್ಧನನೇ ಹೇಳುತ್ತಾನೆ. ಅದಕ್ಕೆ ವಿರುದ್ಧವಾದ ಸಿದ್ಧಾಂತವೂ ಸಮಕಾಲೀನ ಕಾಲದಲ್ಲಿ ಇತ್ತೆಂಬುದು ತಿಳಿದುಬರುತ್ತದೆ (ಉದಾ : ಮನೋರಥ). ಆದರೆ, ಧ್ವನಿಯನ್ನು ಪರಿಷ್ಕಾರ ಮಾಡಿ, ಅದನ್ನು ಸಾಹಿತ್ಯವಿಮರ್ಶೆಯಲ್ಲಿ ಸಿದ್ಧಾಂತದ ಮಟ್ಟಕ್ಕೆ ತಂದ ಶ್ರೇಯಸ್ಸು ಆನಂದವರ್ಧನನದು. ಆದ್ದರಿಂದ, ಮಾರ್ಗಕಾರನೂ ಧ್ವನಿವಿರೋಧಿಯಾಗಿರಬಹುದು. ಆದರೆ, ಅವನು ಕೊಟ್ಟಿರುವ ಉದಾಹರಣೆಯನ್ನು ಅತಿಶಯೋಕ್ತಿ ಎನ್ನುವುದು ಎಷ್ಟು ಸಮಂಜಸವೆಂಬುದನ್ನು ಇನ್ನೂ ಸ್ಪಷ್ಟಪಡಿಸಬೇಕಾಗಿತ್ತು. ಎರಡನೆಯದಾದ ತದ್ಭವಾಧಿಕರಣ, ಮಾರ್ಗಕಾರನ ಕವಿರಾಜಮಾರ್ಗದ ಎರಡನೆಯ ಪರಿಚ್ಛೇದದಲ್ಲಿ ದಕ್ಷಿಣೋತ್ತರಮಾರ್ಗವಿವರಣೆಯ ಸಂದರ್ಭದಲ್ಲಿ ಬರುವ "ಅರಿಪುವೆಂ ತದ್ಭವದೊಳ್..." ಎಂಬಲ್ಲಿನ ತದ್ಭವ ಶಬ್ದದ ವಿಶ್ಲೇಷಣೆ. ಈ ಶಬ್ದವು ಯೋಗರೂಢವೇ ಅಥವಾ ಯೌಗಿಕವೇ ಎಂಬ ಸಂಶಯವನ್ನೆತ್ತಿ, ವ್ಯಾಕರಣಪ್ರಸಿದ್ಧವಾದ ಅರ್ಥವನ್ನು ಹೇಳುವುದೇ ಉಚಿತವೆಂದು ಅಭಿಪ್ರಾಯಪಡುತ್ತಾರೆ. ಪ್ರಸಂಗಕ್ಕೆ ತಕ್ಕಂತೆ ಇತರ ಅನೇಕ ವಿದ್ವಾಂಸರುಗಳ ಅಭಿಪ್ರಾಯಗಳನ್ನು ಉಲ್ಲೇಖಿಸುತ್ತಾರೆ. ಆದರೆ, ಕೊನೆಯಲ್ಲಿ ಸಂಶಯ ಹಾಗೇ

---

ಲೇಖಕರು : ಯು. ಕೃಷ್ಣ ಶರ್ಮ ; ಪ್ರಕಾಶನ : ಪ್ರಸಾದ ಪ್ರಕಾಶನ, 3, ಶ್ರೀ ಸುಬ್ರಹ್ಮಣ್ಯ ಸ್ವಾಮಿ ಮಂದಿರಂ, ವಿಶ್ವೇಶ್ವರಪುರ, ಬೆಂಗಳೂರು–560 004 ; ಪುಟಗಳು : 83 ; ಬೆಲೆ : ರೂ. 4.

ಉಳಿಯುತ್ತದೆ. ಮೂರನೆಯದೂ ಸಹ ಕವಿರಾಜಮಾರ್ಗದಲ್ಲಿ ಬರುವ "ಸಮಸಂಸ್ಕೃತ" ಎಂಬುದರ ವಿಮರ್ಶೆ. ಸಮಸಂಸ್ಕೃತವೆಂಬುದು ಸಂಸ್ಕೃತ ಕಾವ್ಯಗಳನ್ನು ಸೂಚಿಸುತ್ತದೆಯೋ ಅಥವಾ ಪಾರಿಭಾಷಿಕ ಪದವೇ ? ಮಾರ್ಗಕಾರನ ಆಶಯವೇನೆಂಬುದನ್ನು ವಿಶ್ಲೇಷಣೆ ಮಾಡುತ್ತಾರೆ. ಆದರೆ, ಕೊನೆಯಲ್ಲಿ ಊಹೆಯಲ್ಲಿ ನಿಲ್ಲಿಸುತ್ತಾರೆಯೇ ಹೊರತು, ಇದವಿತ್ಥಂ ಎಂಬ ನಿಶ್ಚಯವಿಲ್ಲ. ಮುಂದಿನದು "ವಾಚ್ಯವಾದ ಕಾವ್ಯಾರ್ಥವೂ ಸಹೃದಯ ಶ್ಲಾಘ್ಯವಲ್ಲವೇ" ಎಂಬುದು. ವಾಚ್ಯವಾದ ಕಾವ್ಯಾರ್ಥವೂ ಸಹೃದಯ ಶ್ಲಾಘ್ಯವಾಗಬಹುದೆಂದು ಊಹಿಸಬಹುದೆಂದು ಅಭಿಪ್ರಾಯಪಡುತ್ತಾರೆ. ಇದನ್ನು ಒಪ್ಪುವುದಾದರೆ, ಧ್ವನಿಸಿದ್ಧಾಂತಕ್ಕೆ ಮೂಲೇ ಕುಠಾರಾಘಾತವಾಗುತ್ತದೆ. ಐದನೆಯದೂ ಸಹ ಕವಿರಾಜಮಾರ್ಗದಲ್ಲಿ ಬರುವ "ತದಾದ್ಯ ಕಾವ್ಯಂ" ಎಂಬುದರ ವಿಮರ್ಶೆ.

ಈ ಐದೂ ಲೇಖನಗಳಲ್ಲಿ ಸ್ಪಷ್ಟವಾಗಿ ಲೇಖಕರ ವಿದ್ವತ್ತಿನ ಪರಿಚಯ ಮತ್ತು ಈ ಪ್ರಸಂಗಗಳಲ್ಲಿ ಎದುರಾಗುವ ಸಮಸ್ಯೆಗಳನ್ನು ಬಗೆಹರಿಸಲು ಮಾಡಿರುವ ಪ್ರಾಮಾಣಿಕ ಪ್ರಯತ್ನ ಸ್ತುತ್ಯವಾದವು. ಆದರೆ, ಈ ಎಲ್ಲಾ ಪ್ರಸಂಗಗಳಲ್ಲಿ ಲೇಖಕರು ತಮ್ಮ ಖಚಿತವಾದ ನಿಲುವನ್ನು ಸ್ಪಷ್ಟಪಡಿಸುವುದಿಲ್ಲ.

ಕೊನೆಯಲ್ಲಿ ಬರುವ ಎರಡು ಲೇಖನಗಳೂ ಸಂಸ್ಕೃತದ ಅನುವಾದಗಳು. ಮೂಲ ಸಂಸ್ಕೃತ ಲೇಖಕರು ಮಹಾಭಾರತದ ಕಾಲದಲ್ಲಿ ಮಹಿಳೆಗಿದ್ದ ಸ್ಥಾನಮಾನಗಳ ಬಗ್ಗೆ ಬಹು ಚೆನ್ನಾಗಿ ವಿಶ್ಲೇಷಣೆ ಮಾಡಿದ್ದಾರೆ. ಇಂದೂ ಸಹ ಎಷ್ಟು ಸಮಂಜಸವೆಂಬುದು ತಿಳಿದುಬರುತ್ತದೆ. ಅನುವಾದ ಚೆನ್ನಾಗಿದೆ.

ಆದರೆ, ಗ್ರಂಥದಲ್ಲಿ ಮುದ್ರಣ ದೋಷಗಳು ಹೇರಳವಾಗಿವೆ. ಕೆಲವೊಮ್ಮೆ ಮೂಲ ಅರ್ಥಕ್ಕೆ ಧಕ್ಕೆ ಬರುವಂತಹ ದೋಷಗಳಿವೆ. ಸರಿಯಾಗಿ ಕರಡುಪ್ರತಿಯನ್ನು ತಿದ್ದಿದ್ದರೆ ಚೆನ್ನಾಗಿತ್ತು. ಒಟ್ಟಿನಲ್ಲಿ ಲೇಖಕರು ಹೇಳುವಂತೆ "ಹವ್ಯಾಸ" ಲೇಖನಗಳಾದರೂ, ಆಸಕ್ತರು ಒಮ್ಮೆ ಓದುವಂತಹ ಗ್ರಂಥ.

—**ಎಸ್. ರಾಮಚಂದ್ರಶಾಸ್ತ್ರೀ**

# ತುಳು ಜಾನಪದ ಕಥೆಯು ಕನ್ನಡ ಕಾದಂಬರಿ

## ತುಳುನಾಡ ಸಿರಿ

ಕರ್ನಾಟಕ ರಾಜ್ಯದಲ್ಲಿ ಕಾಸರಗೋಡೂ ಸೇರಿ, ದಕ್ಷಿಣ ಕನ್ನಡ ಜಿಲ್ಲೆಯು ಬಹು ಭಾಗ ತುಳುನಾಡು, ಈ ತುಳುನಾಡಿನ ಪ್ರದೇಶದಲ್ಲಿ ಹೆಚ್ಚಿನವರ ಆಡುಮಾತು ತುಳು. ತುಳುವಿನಲ್ಲಿ ವಿಪುಲವಾಗಿ ಜಾನಪದ ಸಾಹಿತ್ಯ ಸಂಪತ್ತಿದೆ. ಪಾರ್ದನ (ಪಾಡ್ದನ) ಎಂಬುದು ಅವರಲ್ಲಿ ಒಂದು ವರ್ಗ. ತುಳುನಾಡಿನ ನಾನಾ ಸ್ಥಳಗಳಲ್ಲಿರುವ ದೇವಸ್ಥಾನ ಭೂತಸ್ಥಾನಗಳಲ್ಲಿ ಹಾಗೂ ಬನಗಳಲ್ಲಿ ನೆಲೆಗೊಂಡು ಪೂಜೆ, ಕೋಲ, ಆಯನ, ತಂಬಿಲಗಳನ್ನು ಕೈಕೊಂಡು, ನಂಬಿದವರಿಗೆ ಇಂಬೀವ ಮಹಿಮೆಯುಳ್ಳ ಭೂತಗಳ ಪುರಾಣ ಕಥೆಗಳು (ಪಳಮೆಗಳು) ಈ ಪಾರ್ದನೆಗಳ ಸಂಧಿಗಳಲ್ಲಿ ಬರುತ್ತವೆ. ಕೋಟಿ ಚೆನ್ನಯರ ಕಥೆ ಪಾರ್ದನದಿಂದಲೇ ಕನ್ನಡಕ್ಕೆ ಬಂದುದು. ಬೇರೆ ಬೇರೆ ದೈವಗಳ-ಭೂತಗಳ ಪಾರ್ದನಗಳಿವೆ. ಭೂತದ ಕೋಲಗಳಲ್ಲಿ ಆಯಾ ಭೂತಕ್ಕೆ ಸಂಬಂಧಿಸಿದ ಪಾರ್ದನವನ್ನು ದುಡಿ ವಾದ್ಯಗಳ ಹಿಮ್ಮೇಳದಿಂದ ಉಚ್ಚ ಕಂಠದಲ್ಲಿ ಹೇಳಲಾಗುತ್ತದೆ. ಪ್ರಾಚೀನ ತುಳುನಾಡಿನ ಜನರ ಬದುಕು ನಂಬಿಕೆಗಳು. ಭೂತವಾಗಿ ಪರಿಣಮಿಸಿದ ಶೂರರ ಹಾಗೂ ವೀರವನಿತೆಯರ ಕೆಲವು ನೈತಿಕ ದೌರ್ಬಲ್ಯದೊಂದಿಗೆ ಅವರ ಶೌರ್ಯ ಸಾಹಸ ಅಭಿರುಚಿಗಳು, ಪಂಥ ಪೌರುಷಗಳು, ವಾಗ್ವೈಖರಿಗಳು, ಕೋಪತಾಪಗಳು, ತದನುಗುಣ ವರ್ತನೆಗಳು. ಆತ್ಮಾರ್ಪಣೆ- ಮುಂತಾದವುಗಳ ರೋಮಾಂಚಕ ಚಿತ್ರಣ ಇವುಗಳ ಕಥಾವಸ್ತುವಿನಲ್ಲಿದೆ. ಪ್ರಸ್ತುತ 'ತುಳುನಾಡ ಸಿರಿ' ಎಂಬುದು 'ಸಿರಿಯಕ್ಕೆ ಪಾರ್ದನ' ಎಂಬುದನ್ನು ಆಧರಿಸಿ ಕನ್ನಡದಲ್ಲಿ ನಿರೂಪಿತವಾಗಿರುವ ಕಾದಂಬರಿ.

ಈ ಕಥಾವಸ್ತು ತುಳುಯಕ್ಷಗಾನ ಪ್ರಸಂಗವಾಗಿ, ಹಲವು ವರ್ಷಗಳಿಂದ ದ.ಕ. ಜಿಲ್ಲೆಯ ಯಕ್ಷಗಾನ ಮೇಳಗಳಲ್ಲಿ ಬಯಲಾಟವಾಗಿಯೂ ಪ್ರದರ್ಶಿಸಲ್ಪಡುತ್ತಿದೆ. ರಜತಪರದೆಯಲ್ಲಿಯೂ ಇದು ಪ್ರದರ್ಶಿತವಾಗುತ್ತಿದೆ. ಈ ಕಥೆಯ ರಸವಂತಿಕೆ ಹಾಗೂ ಜನಪ್ರಿಯತೆಯೇ ಇದಕ್ಕೆ ಕಾರಣ. ಈ ಕಾದಂಬರಿಯ ಕಥಾನಿರೂಪಣೆಗೆ ಮಾನ್ಯ ಲೇಖಕರು ಒಂದು ಸುಂದರವಾದ ಹಾಗೂ ಕುತೂಹಲೋತ್ಪಾದಕವಾದ ಸ್ವವಿಮರ್ಶೆಯ ಹಿನ್ನೆಲೆಯ ನೆಲೆಗಟ್ಟನ್ನು ಮಾಡಿಕೊಂಡಿದ್ದಾರೆ.

ಲೇಖಕರಿಗೆ ಅಭಿನ್ನರಾಗಿರುವ ರವಿ ಎಂಬವರು ದ.ಕ. ಜಿಲ್ಲೆಯಲ್ಲಿರುವ ತಮ್ಮ ಚಿಕ್ಕಪ್ಪ ಶ್ರೀ ಎನ್. ಸುಬ್ಬರಾಯರ ಷಷ್ಟ್ಯಬ್ದ ಸಮಾರಂಭಕ್ಕಾಗಿ ಬೆಂಗಳೂರಿನಿಂದ

---

ಲೇಖಕರು : ಎನ್. ವಿ. ರಾವ್ : ಪ್ರಕಾಶಕರು : ಪ್ರಗತಿ ಪಬ್ಲಿಕೇಷನ್ಸ್, 20, 8ನೇ ಕ್ರಾಸ್, ವಿಲ್ಸನ್ ಗಾರ್ಡನ್, ಬೆಂಗಳೂರು-560027 : ಆಕೃತಿ : ಕಿರೀಟ ಅಷ್ಟದಳ ; ಪುಟಗಳು : 284 ; ಬೆಲೆ : ರೂ. 15-00 (ಪ್ರ.ಮು. 1984)

ಬರುತ್ತಾರೆ. ಸಂದಳಿಕೆ ದೇವಸ್ಥಾನಕ್ಕೆ ಇಬ್ಬರೂ ಹೋಗುತ್ತಾರೆ. ಅಲ್ಲಿ ಮಹಾಲಿಂಗೇಶ್ವರ ದೇವರ ಬಲಗಡೆಯಿರುವ ಅಬ್ಬಗ, ದಾರಗ, ಎಂಬೆರಡು ದೈವಗಳ ಮೂರ್ತಿಗಳನ್ನು ಕಂಡಾಗ ಅವನ್ನು ಆರಾಧಿಸಲು ಕಾರಣವೇನೆಂದು ಲೇಖಕರು ಕೇಳುತ್ತಾರೆ. ಅದಕ್ಕೊಂದು ಕಥೆಯಿರುವುದಾಗಿ ರಾಯರು ಹೇಳುತ್ತಾರೆ. ಮರುದಿನ ಇವರಿಬ್ಬರೂ ಉರ್ಕಿದೊಟ್ಟಿಯ ಅಬ್ಬಗ–ದಾರಗ ಗುಡಿಗೆ ಬರುತ್ತಾರೆ. ರಾಯರು ಹೀಗೆನ್ನುತ್ತಾರೆ :

ಸತ್ಯಲೋಕದ ಬ್ರಹ್ಮನ ಸಭೆಯಲ್ಲಿ ಸಪ್ತಮಾತೃಕೆಯರ ಮತ್ತತೆಯ ನೃತ್ಯಕ್ಕೆ ಕೋಪಗೊಂಡ ಬ್ರಹ್ಮನು–'ನೀವು ಭೂಮಿಯಲ್ಲಿ ಮನುಷ್ಯರಾಗಿ ಜನಿಸಿ' ಎಂದು ಶಪಿಸುತ್ತಾನೆ. ಅವರು ಪಶ್ಚಾತ್ತಾಪದಿಂದ ಕ್ಷಮಾಯಾಚನೆ ಮಾಡಿದಾಗ ಒಲಿದ ಬ್ರಹ್ಮನು–'ನೀವು ಭೂಮಿಯಲ್ಲಿ ಜನಿಸಿ, ಮಹಿಮೆ ತೋರಿ, ದೇಹ ತೊರೆದು, ಸತ್ಯದೇವತೆಗಳಾಗಿ ಭಕ್ತರನ್ನು ಸಲಹಿರಿ' ಎಂದು ವರವಿತ್ತನು. ಅದರಂತೆ ಜನಿಸಿದವರು ಸಿರಿ, ಅಬ್ಬಗ, ದಾರಗ, ದಾರು, ಸಾಮು, ಸೊನ್ನೆ, ಗಿಂಡಿ – ಎಂಬ ಏಳು ಮಂದಿ ಮಾತೃಕೆಯರು. ಇವರೆಲ್ಲ ಈ ಕಾದಂಬರಿಯಲ್ಲಿ ಪ್ರಮುಖ ಪಾತ್ರರು. ಅವರಲ್ಲಿ ಸಿರಿ ಕಥಾನಾಯಿಕೆಯೆನ್ನಬಹುದು. ರಾಯರ ಮಾತಿನಿಂದ ಕುತೂಹಲ ಕೆರಳಿ ಲೇಖಕರು ಸಿರಿಯ ಕಥೆಯನ್ನು ವಿವರವಾಗಿ ಕೇಳಬಯಸುತ್ತಾರೆ. ಆ ಪಾರ್ದನವನ್ನು ಬಲ್ಲ ಬಾಬು ಪೂಜಾರಿಯನ್ನು ರಾಯರು ಕರೆಸುತ್ತಾರೆ. ಬಾಬು ತುಳುವಿನಲ್ಲಿ ಈ ಪಾರ್ದನವನ್ನು ಹೇಳಿದಂತೆ, ಲೇಖಕರು ಕನ್ನಡಿಸುತ್ತಾರೆ. ಮೂಲದ ಕಥಾಭಾಗವನ್ನು ಭಾವ ವರ್ಣನೆಗಳಿಂದ ಅಲಂಕರಿಸಿ, ಮೂಲಕಥೆಗೆ ಭಂಗಬಾರದಂತೆ ಅಲ್ಲಲ್ಲಿ ಸ್ವಲ್ಪ ಮಾರ್ಪಡಿಸಿ ಕನ್ನಡದಲ್ಲಿ ರಚನೆ ಮಾಡುತ್ತಾರೆ, ಇದು ಹದಿನೈದು ದಿನಗಳಲ್ಲಿ ನಿರೂಪಿತವಾದ ಕಥೆಯಾಗಿ ಕಂಡುಬರುತ್ತದೆ. ಬಾಬುವಿನ ನಿರೂಪಣೆಯಲ್ಲಿ ಬರುವ ಅಮಾನುಷ ಸಂಗತಿಗಳು, ಅಂದರೆ ಇಂದಿನ ಭೌತವಿಜ್ಞಾನಕ್ಕೆ ನಿಲುಕದ ವಿಷಯಗಳು ಬಂದಾಗ, ಲೇಖಕರು ಓದುಗರ ಪ್ರತಿನಿಧಿಯಾಗಿ ಆಕ್ಷೇಪವೆತ್ತುತ್ತಾರೆ. ಆಗ ರಾಯರಿಂದ ಅವಕ್ಕೆಲ್ಲ ಉತ್ತರ ದೊರೆಯುತ್ತದೆ. ಈ ಬಗೆಯ ನಿರೂಪಣದಿಂದ ಈ ಕಾದಂಬರಿ ಓದುಗರ ಮನಸೆಳೆದು ಉದ್ದಕ್ಕೂ ಓದಿಸುತ್ತದೆ. ಕೃತಿಯ ಉದ್ದಕ್ಕೂ ದೈವಲೀಲೆ ಮೆರೆಯುತ್ತದೆ. 'ಅಯ್ಯೋ, ಹೀಗಾಗಬಾರದಿತ್ತು' ಎನಿಸುತ್ತದೆ. ಬಂಟರ ಜಾತಿಯ ಮನೆತನದ ನಾಲ್ಕು ತಲೆಮಾರುಗಳ ಕಥೆ ಈ ಕಾದಂಬರಿಯಲ್ಲಿದೆ.

ಈ ಕಾದಂಬರಿಯ ಕಥಾವಸ್ತು ಉದ್ದಕ್ಕೂ ದುರಂತದ ಛಾಯೆಯುಳ್ಳದು. ಸತ್ಯನಾಪುರದ ಬಿರುಮಾಳ್ವ ಸೋಮಕ್ಕ ದಂಪತಿಗಳಿಗೆ ಬಹುಕಾಲ ಮಕ್ಕಳಾಗಲಿಲ್ಲವೆಂಬ ದುಃಖ. ದೇವರ ಒಲ್ಮೆಯಿಂದ ಹುಟ್ಟಿದ ಮಗು ಪ್ರಸವದಲ್ಲಿಯೇ ಸತ್ತಿತು : ಹೆತ್ತತಾಯಿಯೂ ಸತ್ತಳು. ಆಳ್ವನ ದೂರಸಂಬಂಧದ ತಂಗಿ ಬೊಮ್ಮಿ. ಇವಳು ಸೂಡದ ಅಣ್ಣುಶೆಟ್ಟಿಯನ್ನು ವರಿಸಿ ಶಂಕರಾಳ್ವನನ್ನು ಹೆತ್ತಳು. ಶಂಕರಾಳ್ವನಿಗೆ ಒಂದು ವರ್ಷವಾದಾಗ ಪಿತೃವಿಯೋಗ, ಮೂರು ವರ್ಷವಾದಾಗ ಮಾತೃವಿಯೋಗ.

ಇದರಿಂದಾಗಿ ಬಿರುಮಾಳ್ವನಿಂದ ಪೋಷಣೆ ; ಅಸ್ತಿ ಪಾಲು. ಬಿರುಮಾಳ್ವನು ಲೋಕ ನಾಡಿನಲ್ಲಿ ದೇವಾಲಯ, ಬ್ರಹ್ಮಗುಂಡ, ದೈವಗುಡಿಗಳನ್ನು ಕಟ್ಟಿಸಿ ದೇವರಪ್ರಸಾದ ದೊಡನೆ ತನ್ನ ಊರಿಗೆ ಬಂದನು. ಆ ಪ್ರಸಾದದ ಸ್ಥಾನದಲ್ಲಿ ಹೆಣ್ಣು ಶಿಶುವಿನ ಉದ್ಭವ! ಆಕೆಯೇ ಸಿರಿ. ಹೀಗೆ ಸಿರಿ ಅಯೋನಿಜೆ. ಇವಳ ಜಾತಕ ಫಲ ಕೆಟ್ಟದಾಗಿತ್ತು.

ಇನ್ನೊಂದೆಡೆ ಬಸರೂರಿನ ಬೀಡಿನ ಒಡತಿ ಶಂಕರ ಪೂಂಜೆತಿ. ಮಗ ಕಾಂತಣ. ಈ ಕಾಂತಣನಿಗೆ ಸಿದ್ದು ಎಂಬ ಸೂಳೆ. ಈತನು ಮುಂದೆ ಸಿರಿಯನ್ನು ವರಿಸುತ್ತಾನೆ. ಸಿರಿ ಗರ್ಭಿಣಿ. ಆಕೆ ಹೆರಿಗೆಗಾಗಿ ಆಳ್ವನಲ್ಲಿಗೆ ಬಂದು ಕುಮಾರನನ್ನು ಪಡೆಯುತ್ತಾಳೆ. ಶಂಕರನ ಅಧಿಕಾರದಾಹದಿಂದಾಗಿ ಸಿರಿ ನೊಂದುಕೊಳ್ಳುತ್ತಾಳೆ. ಆಳ್ವನು ಸಾಯು ತ್ತಾನೆ. ಸಿರಿ, ದಾರು ಎಂಬ ದಾಸಿಯೊಡನೆ ಮಗುವನ್ನು ತೊಟ್ಟಿಲು ಸಮೇತ ಹೊರಿಸಿಕೊಂಡು ಸತ್ಯನಾಪುರದಿಂದ ಹೊರಡುತ್ತಾಳೆ. ಗಂಡನ ಮನೆಗೆ ಬಂದಾಗ ಅವಮಾನ ಸಹಿಸದೆ, ತನ್ನ ಕೈಬಳೆ ಮುರಿದು, ಕರಿಮಣಿ ಎಳೆಯನ್ನು ಕಡಿದು, ಮೂಗುತಿ ತೆಗೆದು ವೀರಪ್ರತಿಜ್ಞೆಗೈದು ಹೊರಟುಹೋಗುತ್ತಾಳೆ. ಆಕೆ ಸತ್ಯದ ಸಿರಿ. ಶಾಪಾನುಗ್ರಹ, ಸೃಷ್ಟಿಲಯ ಶಕ್ತಿ ಅವಳ ಬಾಯಿಮಾತಿಗೆ ಇರುತ್ತದೆ. ಆಕೆಗೆ ಕೇಡೆಣಿಸಿದವರಿಗೆಲ್ಲ ಕೇಡಾಗುತ್ತದೆ, ಒಳ್ಳಿತನ್ನು ಎಸಗಿದವರಿಗೆಲ್ಲ ಲೇಸಾಗು ತ್ತದೆ. ಹರಿವ ಹೊಳೆ ಆಕೆಗೆ ದಾಟಲು ದಾರಿಬಿಡುತ್ತದೆ. ಆಕೆಯಿಂದ ಹಲವು ದೈವಗಳ ಸೃಷ್ಟಿಯಾಗುತ್ತದೆ. ಆಕೆಯ ಹತ್ತುತಿಂಗಳ ಮಗ ಏಳು ವರ್ಷದ ಬಾಲಕ ನಾಗಿ ಎದ್ದು ಮಾತಾಡುತ್ತಾನೆ. ಅವನ ಅಪೇಕ್ಷೆಯಂತೆ, ಅವನನ್ನು ಸಿರಿಯು ಮಾಯ ಮಾಡುತ್ತಾಳೆ; ಕಾರಣಿಕ ದೈವವಾಗಿರುವಂತೆ ಆಶೀರ್ವದಿಸುತ್ತಾಳೆ. ಮಾಯ ಮಾಡಿದ ದಾರು ಬೈಕಡ್ತಿ ದೈವವಾಗುತ್ತಾಳೆ.

ಮುಂದೆ ಸಿರಿಗೆ ಬೋಳದ ಅರಸರ ಆಶ್ರಯ ದೊರೆಯುತ್ತದೆ. ಈ ಬೋಳದ ಅರಸರು ಅಣ್ಣತಮ್ಮಂದಿರು ; ಮಾಯದ ಮಕ್ಕಳು. ಎರಡು ಕೆಂಪು ಕಮಲಗಳಲ್ಲಿ ಹುಟ್ಟಿದವರು ! ಇವರು ಸಿರಿಯನ್ನು ಕೊಟ್ರಾಡಿಯ ಕೊಡ್ಯರಾಳ್ವನಿಗೆ ಮದುವೆ ಮಾಡಿಸುತ್ತಾರೆ. ಈ ಕೊಡ್ಯರಾಳ್ವನಿಗೆ ಸಾವು ಮೊದಲ ಹೆಂಡತಿ. ಸಿರಿ ಗರ್ಭವತಿ ಯಾಗಿ ಹೆತ್ತುದು ಸೊನ್ನೆ ಎಂಬವಳನ್ನು. ಸಿರಿಯ ಜೀವನ ಕೊನೆಗೊಂಡಿತು. ಸೊನ್ನೆಯನ್ನು ಕಾನಬೆಟ್ಟು ಚಂದಯ್ಯ ಸಲಹುತ್ತಾನೆ. ಸೊನ್ನೆಯು ಗಿಂಡಿ ಎಂಬ ಇನ್ನೊರ್ವ ಕಾರಣಕನ್ನಿಕೆಯೊಡನೆ ಬೆಳೆಯುತ್ತಾಳೆ. ಉರ್ಕಿದೊಟ್ಟಿನ ಗುರುಮಾರ್ಲ ನನ್ನು ವರಿಸಿ, ಅಬ್ಬಗ, ದಾರಗ – ಎಂಬ ಅವಳಿ ಹೆಣ್ಣುಮಕ್ಕಳನ್ನು ಪಡೆಯುತ್ತಾಳೆ. ಈ ಅವಳಿ ಹೆಣ್ಣುಮಕ್ಕಳು ಕಾರ್ಕಳದ ಚಂದ್ರಾಮುಶೆಟ್ಟರ ಅವಳಿ ಗಂಡುಮಕ್ಕಳನ್ನು ವರಿಸುತ್ತಾರೆ. ಈ ಅಬ್ಬಗ ದಾರಗರು ಪರಸ್ಪರ ಚೆನ್ನೆಯಾಟ ಆಡುತ್ತಿರುವಾಗ ಅಬ್ಬಗ ಕೋಪಿಸಿ, ಚೆನ್ನೆಮಣೆಯಿಂದ ತಂಗಿ ದಾರಗಳನ್ನು ಹೊಡೆಯಲು, ದಾರಗ ಸಾಯುತ್ತಾಳೆ. ತಂಗಿಯ ಮೃತದೇಹವನ್ನೆತ್ತಿ ಬಾವಿಗೆ ಹಾಕಿ ಅಬ್ಬಗಳೂ ಮರಣ

ವಸ್ನಪ್ಪುತ್ತಾಳೆ. ಇವರ ಶವದಹನವಾಗುತ್ತಿರಲು ಈ ಶವದ್ವಯಗಳು ಬಂಗಾರದ ಜೋಡುದುಂಬಿಯಾಗಿ ಮೇಲೇರಿ ಮಾಯವಾಗುತ್ತವೆ. ಈ ಅಬ್ಬಗ ದಾರಗರ ಮೂರ್ತಿಗಳು ನಂದಳಿಕೆ ಮಹಾಲಿಂಗೇಶ್ವರ ದೇವರ ಬಲಗಡೆ ಪ್ರತಿಷ್ಠಿತವಾಗುತ್ತವೆ. ಈ ಸಿರಿ, ಅಬ್ಬಗ ದಾರಗರು ಆರಾಧ್ಯ ದೈವಗಳಾಗುತ್ತವೆ.

ಹೀಗೆ ಕಾದಂಬರಿ ನಾಲ್ಕು ತಲೆಮಾರಿನ ಕಥೆಯಾಗಿ ಉದ್ದಕ್ಕೂ ಅದ್ಭುತ-ರೌದ್ರ-ರಮ್ಯ ಕಥನವಾಗಿ ತುಳು ನಾಡಿನ ಪಳಮೆಗಳಲ್ಲಿ ಒಂದಾಗಿ ಜನರಂಜನೆಯನ್ನು ಒದಗಿಸುತ್ತದೆ. ತುಳು ಪಾರ್ದನದ ಈ ಕಥೆಯನ್ನು ಕನ್ನಡಕ್ಕೆ ರೋಚಕವಾಗಿ ಪರಿವರ್ತಿಸಿ ಒದಗಿಸಿರುವ ಲೇಖಕರನ್ನು ಓದುಗರು ಅಭಿನಂದಿಸುತ್ತಾರೆ.

ಕನ್ನಡ ನಾಡಿಗೆ ಅಭಿನ್ನವಾಗಿರುವ ತುಳುನಾಡಿನ ಜನಜೀವನ ಹಾಗೂ ಪ್ರಾಚೀನ ಸಂಸ್ಕೃತಿಯ ಜೀವಂತ ಚಿತ್ರಣ ಈ ಕೃತಿಯಲ್ಲಿ ಎದ್ದುಕಾಣುವುದು ಇದರ ವೈಶಿಷ್ಟ್ಯ. ಇದನ್ನೊಂದು ಕಾದಂಬರಿ ಎನ್ನುವುದಕ್ಕಿಂತಲೂ ಸಂಸ್ಕೃತಿನಿರೂಪಕ ಕೃತಿ ಎಂದು ಹೇಳಬಹುದು. ಈ ದೃಷ್ಟಿಯಿಂದ ಕೂಡ ಈ ಗ್ರಂಥದ ಶೀರ್ಷಿಕೆ ಅನ್ವರ್ಥಕವಾಗಿದೆ.

ಈ ಬಗೆಯ ತುಳುಸಾಹಿತ್ಯವನ್ನು ಕನ್ನಡಿಗರು 'ಪಾಡ್ದನ' ಎಂದು ಗತಾನು ಗತಿಕವಾಗಿ ಉಚ್ಚಾರಣೆ ಮಾಡುತ್ತ ಬಂದಿದ್ದಾರೆ. ಪಾಡ್ದನೆ, ಪಾಡ್ದನಿ, ಪಾಡ್ದೊನೆ-ಎಂತಲೂ ಬೇರೆ ಬೇರೆ ಲೇಖಕರು ಉಚ್ಚಾರಣೆ ಮಾಡಿದ್ದಾರೆ. ವಾಸ್ತವವಾಗಿ ಇದರ ಉಚ್ಚಾರಣೆ ತುಳುಜನರಲ್ಲಿ ಪಾರ್ತನ, ಪಾರ್ದನ-ಎಂದಿದೆ. ನನ್ನ ಸಂಶೋಧನೆ ಯಂತೆ ಇವೆರಡೂ ತುಳುವಿನ 'ಪರತ್ತನ' ಎಂಬುದರ ಮಾರ್ಪಟ್ಟ ರೂಪಗಳು. ಪರತ್ತನ ಎಂದರೆ 'ಪಳತನ' ಅಥವಾ ಪಳಮೆ (Antiquity) ಎಂದು ಹಿಂದೆಯೇ ನಾನು ಪ್ರತಿಪಾದಿಸಿರುತ್ತೇನೆ. ಆದುದರಿಂದ ಈ ವಿಮರ್ಶೆಯಲ್ಲಿ 'ಪಾರ್ದನ' ಎಂದು ಪ್ರಯೋಗಿಸಿಕೊಂಡಿದ್ದೇನೆ.

—**ಟಿ. ಕೇಶವಭಟ್ಟ**

# ಸಾಹಿತ್ಯ ಪ್ರಭ*

ವಿದ್ವಾನ್ ಕೆ. ವೆಂಕಟರಾಯಾಚಾರ್ಯ ಅವರದು ಸಾಹಿತ್ಯ ಸಂಶೋಧನಾ ಕ್ಷೇತ್ರ ದಲ್ಲಿ ಚಿರಪರಿಚಿತ ಹೆಸರು. ಪ್ರಾಚೀನ ಸಾಹಿತ್ಯದ ಪ್ರಾಮಾಣಿಕ ಅಧ್ಯಯನದಿಂದ ಹೊಸ ಪೀಳಿಗೆಯ ಸಾಹಿತ್ಯಾಸಕ್ತರು ದೂರ ಸರಿಯುತ್ತಿರುವ ಇಂದಿನ ಸಂದರ್ಭದಲ್ಲಿ ಶ್ರೀಯುತರ ಸಾಹಿತ್ಯ ಚಿಂತನೆಯ ಪುಸ್ತಕಗಳಿಗೆ ಮಹತ್ವದ ಸ್ಥಾನವಿದೆ. ಪ್ರಸ್ತುತ 'ಸಾಹಿತ್ಯ ಪ್ರಭ' ಪುಸ್ತಕ ಶ್ರೀಯುತರ ಪುಸ್ತಕಗಳಲ್ಲಿ ಏಳನೆಯದು.

ಈ ಪುಸ್ತಕದಲ್ಲಿ ಇಪ್ಪತ್ತು ಲೇಖನಗಳಿದ್ದು, ಅವುಗಳನ್ನು ಮುಖ್ಯವಾಗಿ ಮೂರು ಭಾಗಗಳಾಗಿ ವಿಭಾಗಿಸಬಹುದು: ಸಾಹಿತ್ಯ ವಿಮರ್ಶೆ, ಕೃತಿ ಪರಿಚಯ ಮತ್ತು ಸ್ಥಳ ಹಾಗೂ ವ್ಯಕ್ತಿ ಪರಿಚಯ. ಸಾಹಿತ್ಯ ವಿಮರ್ಶೆಯಲ್ಲಿ ಪಂಪಭಾರತದ ಒಂದು ಪದ್ಯದ ಅರ್ಥ, ಪಂಪಭಾರತದ ನಿರ್ಮಾಣ ಕಾಲ ವಿಚಾರ, ಭರತ ಬಾಹುಬಲಿ ಗಳ ಕತೆಗಳು, ಲಕ್ಷ್ಮೀಶನ ಮತ ವಿಚಾರ, ಮತ್ತು ಶ್ರೀ ಮಧ್ವಾಚಾರ್ಯರ ಕಾಲ ವಿಚಾರ ಈ ಲೇಖನಗಳನ್ನು ಗಮನಿಸಬಹುದು. ವೆಂಕಟರಾಯಾಚಾರ್ಯರ ಪ್ರಾಚೀನ ಸಾಹಿತ್ಯ ವಿಮರ್ಶೆಯ ಅಧ್ಯಯನ ಕ್ರಮ ಮೆಚ್ಚತಕ್ಕದ್ದು. ಆ ನಿಟ್ಟಿನಲ್ಲಿ ಈವರೆಗೆ ನಡೆದಿರುವ ಸಂಶೋಧನೆಗಳು, ಚಿಂತನೆಗಳ ಉಲ್ಲೇಖ, ಅನಂತರ ಅವುಗಳನ್ನು ಕುರಿತ ತಮ್ಮ ವಿವೇಚನೆ ಇತ್ಯಾದಿಯಾಗಿ ಸವಿವರವಾದ ದಾಖಲೆಗಳೊಡನೆ ವಿಚಾರ ಗಳನ್ನು ಮುಂದಿಡುತ್ತಾರೆ. ಅವರೇ ಅರಿಕೆಯಲ್ಲಿ ತಿಳಿಸಿರುವಂತೆ 'ಸಾಹಿತ್ಯ ಕೃತಿಗಳ ಮೇಲೆ ನಡೆದ ವಿಚಾರ ವಿಮರ್ಶೆಗಳನ್ನು ಗಮನಿಸಿದಾಗ, ನನಗೆ ಕಂಡ ಆಶಯ ಗಳನ್ನು ಲೇಖನಗಳಲ್ಲಿ ಪ್ರಕಟಿಸಲಾಗಿದೆ' ಎಂದೇ ಹೇಳಿಕೊಂಡರೂ ಆಳವಾಗಿ ವಿವೇಚಿಸುವ ಸಾಮರ್ಥ್ಯವುಳ್ಳ ವಸ್ತುನಿಷ್ಠ ಸಂಶೋಧಕರು ಎಂಬುದನ್ನು ಅವರ ಈ ಲೇಖನಗಳಿಂದ ತಿಳಿಯಬಹುದು. ಈ ಲೇಖನಗಳನ್ನು ಕುರಿತ ಜಿ. ವರದರಾಜಾರಾವ್ ಅವರ ಸಮಾಲೋಚನೆ (ಪುಸ್ತಕದ ಕೊನೆಯ ಪುಟಗಳಲ್ಲಿದೆ.) ವಿಮರ್ಶೆ ಈ ಅಂಶ ವನ್ನು ಸ್ಪಷ್ಟಪಡಿಸುತ್ತದೆ.

ಕಡೆಂಗೋಡ್ಲು ಅವರ 'ಆದರ್ಶ ಗದ್ಯ ಪ್ರಬಂಧಗಳು', ರಾಘವಾಂಕನ 'ವೀರೇಶ ಚರಿತೆ', ಬಿ.ಎಂ.ಶ್ರೀ. ಅವರ 'ಗದಾಯುದ್ಧ ನಾಟಕಂ', ಶ್ರೀ ಪೇಜಾವರ ಸದಾಶಿವರಾವ್ ಅವರ 'ವರುಣ' ಕವನ ಸಂಕಲನ, ಜ.ಚ.ನಿ. ಅವರ 'ದೇವದೃಷ್ಟಿ', ಡಾ॥ ಜಿ. ವರದರಾಜರಾವ್ ಅವರ 'ಸಾಹಿತ್ಯ ಸಾನ್ನಿಧ್ಯ', ಮುದ್ದಣನ 'ಕುಮಾರ ವಿಜಯ'ದ ಕತೆಯನ್ನೊಳಗೊಂಡಿವೆ ಎಂದು ಹೇಳಲಾಗಿರುವ ಯಕ್ಷಗಾನದ ಕೃತಿ.

---

* ಕೆ. ವೆಂಕಟರಾಯಾಚಾರ್ಯ, ವಿಜಯ ಸಾಹಿತ್ಯಮಾಲೆ, ಸೂರತ್ಕಲ್ ; ಕ್ರೌನ್ ಅಷ್ಟದಳ ; 1983 ; ರೂ. 15–00.

ಕುಳಾಯಿಯ ವೆಂಕಟರಮಣಯ್ಯ ಅವರ 'ಪದ್ಮಾಸುರ ಕಾಳಗ' ಜತೆ ಈಶ್ವರ ಭಾಗವತರ ಯಕ್ಷಗಾನ ಕೃತಿ 'ಅಂಜನಾ ವಿಲಾಸ', ಇವುಗಳ ಬಗ್ಗೆ ಈ ಗ್ರಂಥದಲ್ಲಿ ಲೇಖಕರು ಸವಿವರವಾಗಿ ಪರಿಚಯಮಾಡಿಕೊಡುತ್ತಾರೆ. ವ್ಯಕ್ತಿ ಮತ್ತು ಸ್ಥಳ ಪರಿಚಯವನ್ನು ಕುರಿತಂತೆ ಈ ಸಂಕಲನದಲ್ಲಿ ಶ್ರವಣಬೆಳಗೊಳದ ಗೊಮ್ಮಟ ವಿಚಾರ, ತುಳುವ ಸಂಪ್ರದಾಯದ ಹೆಸರುಗಳು, ಪೊಳಲಿಯ ಪ್ರಾಚೀನ ವಿಚಾರಗಳು, ಕೊಲ್ಲೂರು ಮೂಕಾಂಬಿಕಾ ದೇವಿ, ವಿಜಯ ಧ್ವಜಾಚಾರ್ಯರು, ಶ್ರೀ ರಾಘವೇಂದ್ರ ಗುರುಗಳು ಮತ್ತು ಡಾ॥ ರಘುವೀರ, ಈ ಲೇಖನಗಳನ್ನು ಗಮನಿಸಬಹುದು.

ಒಟ್ಟಿನಲ್ಲಿ ಮಾಹಿತಿ ಸಂಗ್ರಹ ದೃಷ್ಟಿಯಿಂದ ಮತ್ತು ಸಾಹಿತ್ಯ ಚರ್ಚೆಯ ದೃಷ್ಟಿಯಿಂದ ಈ ಸಂಕಲನ ಉತ್ತಮ ಲೇಖನಗಳಿಂದ ಕೂಡಿದ್ದು ಸಂಗ್ರಹಯೋಗ್ಯ ವಾಗಿದೆ.

**ನಾ. ಗೀತಾಚಾರ್ಯ**

# ಪ್ರತಿಷ್ಠಾನ ವಾರ್ತೆ

## ಕಾರ್ಯಸಮಿತಿಯ ಮುಖ್ಯ ನಿರ್ಣಯಗಳು

30-6-1985 ಮತ್ತು 16-11-1985 ದಿನಾಂಕಗಳಂದು ನಡೆದ ಕಾರ್ಯ ಸಮಿತಿಯ ಸಭೆಗಳಲ್ಲಿ ಅಂಗೀಕೃತವಾದ ಕೆಲವು ಮುಖ್ಯ ನಿರ್ಣಯಗಳನ್ನು ಕೆಳಗೆ ಕೊಟ್ಟಿದೆ :—

೧. **ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ ಭಾವಚಿತ್ರದ ಅನಾವರಣ :** ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನದ ಆಜೀವ ಗೌರವ ಪೋಷಕರಾದ ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರಿಗೆ ಜ್ಞಾನಪೀಠ ಪ್ರಶಸ್ತಿ ಬಂದಿರುವ ಈ ಸಂದರ್ಭ ದಲ್ಲಿ ಅವರ ಭಾವಚಿತ್ರವನ್ನು ತಯಾರು ಮಾಡಿಸಿ, ಒಂದು ಅನಾವರಣ ಸಮಾರಂಭ ವನ್ನು ಏರ್ಪಡಿಸಿ, ಕರ್ನಾಟಕ ರಾಜ್ಯದ ಮುಖ್ಯಮಂತ್ರಿಗಳಾದ ಶ್ರೀ ರಾಮಕೃಷ್ಣ ಹೆಗಡೆ ಅವರಿಂದ ಅದನ್ನು ಅನಾವರಣ ಮಾಡಿಸಬಹುದು ; ಈ ಸಮಾರಂಭವನ್ನು ಪ್ರತಿಷ್ಠಾನದ ಕಾರ್ಯಾಲಯದಲ್ಲಿಯೇ ನಡಸಬೇಕೆಂಬ ಸಂಸ್ಥಾಪಕ ಕಾರ್ಯದರ್ಶಿ ಯವರ ಸೂಚನೆಯನ್ನು ಗಮನದಲ್ಲಿಟ್ಟುಕೊಳ್ಳಬಹುದು.

೨. **ಚಂದಾ ಬಾಕಿ ಇರುವ ಸದಸ್ಯರ ವಿಚಾರ :** ಸುಮಾರು 3-4 ವರ್ಷಗಳಿಂದಲೂ ಸದಸ್ಯತ್ವ ಚಂದಾವನ್ನು ಬಾಕಿ ಉಳಿಸಿಕೊಂಡು ಬಂದಿರುವ ಸದಸ್ಯರ ಪಟ್ಟಿಯನ್ನು ಸಮಿತಿಯ ಗಮನಕ್ಕೆ ತರಲಾಯಿತು. ಈ ವಿಚಾರದಲ್ಲಿ ಸಂಸ್ಥಾಪಕ ಕಾರ್ಯದರ್ಶಿ ಯವರು ತಮ್ಮ ಸ್ವಂತ ವಿವೇಚನೆಯಲ್ಲಿ ಯಾವ ಯಾವ ಸದಸ್ಯರನ್ನು ವಜಾ ಮಾಡಬಹುದೆಂಬುದನ್ನು ಗೊತ್ತುಮಾಡಿ, ಚಂದಾ ಬಾಕಿ ಸಲ್ಲಿಸುವಂತೆ ಅವರನ್ನು ಮತ್ತೊಮ್ಮೆ ಪ್ರಾರ್ಥಿಸತಕ್ಕದ್ದು. ಅವರಿಂದ ಏನೂ ಉತ್ತರ ಬಾರದೆ ಇದ್ದ ಸಂದರ್ಭದಲ್ಲಿ ಅಂತಹವರ ಹೆಸರುಗಳನ್ನು ಸಮಿತಿಯ ಗಮನಕ್ಕೆ ತರತಕ್ಕದ್ದು. ಆಗ ಅಂತಹವರನ್ನು ವಜಾ ಮಾಡುವ ಬಗ್ಗೆ ಸಮಿತಿ ತೀರ್ಮಾನ ಮಾಡತಕ್ಕದ್ದು.

೩. **ನಿಯಮಾವಳಿಯ ಪರಿಷ್ಕರಣ ವಿಚಾರ :** ಈ ವಿಚಾರದಲ್ಲಿ ಶ್ರೀಯುತ ಕೆ. ರಾಜಾರಾಯರು ಒಪ್ಪಿಸಿರುವ ಸಲಹೆ ಸೂಚನೆಗಳ ಆಧಾರದ ಮೇಲೆ ಸಂಸ್ಥಾಪಕ ಕಾರ್ಯದರ್ಶಿಯವರು ಪರಿಷ್ಕೃತ ನಿಯಮಾವಳಿಯ ಕರಡನ್ನು ಕನ್ನಡದಲ್ಲಿ ಸಿದ್ಧಪಡಿಸ ತಕ್ಕದ್ದು. ಆ ಕರಡನ್ನು ಪರಿಶೀಲಿಸಿ ಕಾರ್ಯಸಮಿತಿಯ ಒಪ್ಪಿಗೆಗೆ ಇಡುವುದಕ್ಕಾಗಿ ಈ ಕೆಳಗಿನ ಸದಸ್ಯರನ್ನುಳ್ಳ ಉಪಸಮಿತಿಯನ್ನು ನೇಮಿಸಲಾಗಿದೆ :

೧. ಸಂಸ್ಥಾಪಕ ಕಾರ್ಯದರ್ಶಿ : ಶ್ರೀ ಎಂ. ವಿ. ಸೀತಾರಾಮಯ್ಯ
೨. ಗೌರವ ಕಾರ್ಯದರ್ಶಿ : ಶ್ರೀ ಎಂ. ವಿ. ಸತ್ಯನಾರಾಯಣ
೩. ಗೌರವ ಕೋಶಾಧಿಕಾರಿ : ಶ್ರೀ ಎ್. ಎಸ್. ರಾಮಸ್ವಾಮಿ ಅಯ್ಯರ್
೪. ಪ್ರೊ॥ ಜಿ. ವೆಂಕಟಸುಬ್ಬಯ್ಯ

ಕಾರ್ಯಸಮಿತಿಗೆ ಕರಡನ್ನು ಒಪ್ಪಿಸುವುದಕ್ಕೆ ಮೊದಲು ಪ್ರತಿಷ್ಠಾನದ ಅಧ್ಯಕ್ಷರಾದ ಶ್ರೀ ಸಿಟ್ಟೂರು ಶ್ರೀನಿವಾಸರಾಯರು ಕರಡನ್ನು ಪರಿಶೀಲಿಸಿ ಅಗತ್ಯವಾದ ಮಾರ್ಪಾಟುಗಳನ್ನು ಮಾಡಬಹುದು. ಹೀಗೆ ಸಿದ್ಧವಾದ ಅಂತಿಮ ಕರಡನ್ನು ಕಾರ್ಯಸಮಿತಿ ಪರಿಶೀಲಿಸಿ, ಸರ್ವಸದಸ್ಯರ ಸಭೆಯ ಮುಂದೆ ಮಂಡಿಸತಕ್ಕದ್ದು.

೪. **ಸಹೃದಯ ಗೋಷ್ಠಿಯ ಸಂಚಾಲಕರ ನೇಮಕ :** ಶ್ರೀ ನಾ. ಗೀತಾಚಾರ್ಯ ಮತ್ತು ಶ್ರೀ ಎನ್. ರಾಘವೇಂದ್ರ ಇವರುಗಳನ್ನು ಎರಡು ವರ್ಷದ ಅವಧಿಗೆ (ಅಂದರೆ 1985 : 1986) ಸಂಚಾಲಕರಾಗಿ ನೇಮಿಸಲಾಯಿತು. ಅವರು ದಯವಿಟ್ಟು ಈ ಹೊಣೆಗಾರಿಕೆಯನ್ನು ಒಪ್ಪಿಕೊಂಡು ಸಹೃದಯ ಗೋಷ್ಠಿಯ ಉದ್ದೇಶಗಳನ್ನು ಯಶಸ್ವಿಗೊಳಿಸುವಂತೆ ಸಂಸ್ಥಾಪಕ ಕಾರ್ಯದರ್ಶಿಯವರು ಅವರುಗಳನ್ನು ಕೇಳಿಕೊಳ್ಳತಕ್ಕದ್ದು.

೫. **ಪುಸ್ತಕ ಮಾರಾಟ : ಸೋಡತಿ :** ಪ್ರತಿಷ್ಠಾನದ ಸದಸ್ಯರು ಅಥವಾ ಪುಸ್ತಕ ವ್ಯಾಪಾರಿಗಳು ಅಲ್ಲದ ಇತರರು ಯಾರೇ ಆಗಲಿ ಪ್ರತಿಷ್ಠಾನದ ಪ್ರಕಟನೆಗಳನ್ನು ಕೊಂಡುಕೊಂಡರೆ ಅವರಿಗೆ ಶೇ. ೧೦ ರಂತೆ ಸೋಡತಿ ಕೊಡಬಹುದು. ಕೇಂದ್ರ ಹಾಗೂ ರಾಜ್ಯ ಸರಕಾರಗಳ ಅನುದಾನದಿಂದ ಪ್ರಕಟವಾಗುವ ಗ್ರಂಥಗಳಿಗೆ ಶೇ. ೧೫ ರಂತೆ ಸೋಡತಿ ಕೊಡಬಹುದು.

ಪ್ರತಿಷ್ಠಾನದ ಕಾರ್ಯಕ್ರಮಗಳು ಮತ್ತು ಇತರ ಸಂಘ ಸಂಸ್ಥೆಗಳು ನಡಸುವ ಸಮ್ಮೇಳನ, ಸಭೆ, ಸಮಾರಂಭಗಳಲ್ಲಿ ಪುಸ್ತಕ ಮಾರಾಟದ ವ್ಯವಸ್ಥೆ ಮಾಡಿದ ಸಂದರ್ಭದಲ್ಲಿ ಶೇ. 25 ರಂತೆ ಸೋಡತಿ ಕೊಡಬಹುದು.

೬. **ಲೋಚನದ ಚಂದಾ ದರ : ಹೆಚ್ಚುವರಿ, ಮುದ್ರಣ, ಕಾಗದಗಳ ಬೆಲೆ ಈಚಿನ ದಿನಗಳಲ್ಲಿ ಬಹಳವಾಗಿ ಏರಿರುವುದರಿಂದ 'ಲೋಚನ'ದ ಈಗಿನ ಚಂದಾ ದರ 6 ರೂಪಾಯಿಗಳನ್ನು 10 ರೂಪಾಯಿಗಳಿಗೆ ಬರುವ 1986ನೆಯ ಜನವರಿಯಿಂದ (ಎಂದರೆ 1986ರ ಜೂನ್ ಸಂಚಿಕೆಯಿಂದ) ಹೆಚ್ಚಿಸತಕ್ಕದ್ದು. (ಈಗಾಗಲೇ 1986ಕ್ಕೆ ಚಂದಾ ಹಣ ಪಾವತಿ ಮಾಡಿರುವವರಿಗೆ ಈ ಹೆಚ್ಚಿನ ದರ ಅನ್ವಯಿಸುವುದಿಲ್ಲ.)**

## ಸಹೃದಯ ಗೋಷ್ಠಿ

ಪ್ರಸಕ್ತ ವರ್ಷಕ್ಕೆ ಈ ಗೋಷ್ಠಿಯ ಸಂಚಾಲಕರಾಗಿ ಶ್ರೀ ನಾ. ಗೀತಾಚಾರ್ಯ ಮತ್ತು ಶ್ರೀ ಎನ್. ರಾಘವೇಂದ್ರ ಅವರುಗಳು ಆಯ್ಕೆಯಾದರು.

ಆಗಸ್ಟ್ 31 ರಂದು ತಿ. ಶ. ಸುಬ್ಬಕೃಷ್ಣ, ಸೆಪ್ಟೆಂಬರ್ 28 ರಂದು ರಾ. ಸು. ವೆಂಕಟೇಶ್, ಅಕ್ಟೋಬರ್ 13 ರಂದು ಕೆ. ಎಸ್. ಮಧುಸೂದನ ಮತ್ತು ಸಿ. ಎಚ್. ಭಾಗ್ಯ, ನವೆಂಬರ್ 24 ರಂದು ವೈ. ಕೆ. ಸಂಧ್ಯಾಶರ್ಮ ಮತ್ತು ಎಚ್. ಕಲ್ಪನ

ಹಾಗೂ ಡಿಸೆಂಬರ್ 29 ರಂದು ಸಿ. ಪಿ. ರವಿಕುಮಾರ್ ಮತ್ತು ಎಚ್. ಪಿ. ಫಿಲೋಮಿನ ಅವರುಗಳು ಸ್ವರಚಿತ ಕವನಗಳನ್ನು ವಾಚನಮಾಡಿದರು.

ಸಹೃದಯಗೋಷ್ಠಿ ಇನ್ನು ಮುಂದೆ ಸಾಹಿತ್ಯದ ಇತರ ಪ್ರಕಾರಗಳನ್ನು ಕುರಿತ ಚರ್ಚೆ, ಸಂವಾದವನ್ನು ನಡೆಸಲು ಉದ್ದೇಶಿಸಿದೆಯಾದರೂ ಬಿ.ಎಂ.ಶ್ರೀ.ಯವರಿಗೆ ಹೆಚ್ಚು ಪ್ರಿಯವಾಗಿದ್ದ ಹೊಸಗನ್ನಡ ಕಾವ್ಯವನ್ನು ಕುರಿತು ಹೊಸ ಚಿಂತನೆಗಳಿಗೆ ಅವಕಾಶ ಮಾಡಿಕೊಡುವಂತಹ ಕೆಲವು ವಿಶೇಷ ಯೋಜನೆಗಳನ್ನು ಹಮ್ಮಿಕೊಂಡಿದೆ.

1. **ಕವನ ಭಂಡಾರ:** ಹೊಸಗನ್ನಡ ಕಾವ್ಯವನ್ನು ಕುರಿತು ಸಂಶೋಧನೆ ಮಾಡಬಲ್ಲವರಿಗೆ ಅನುಕೂಲವಾಗಲೆಂದು ಇಂದು ತಿಂಗಳಿಗೆ ಹತ್ತಾರು ಕವನಸಂಕಲನ ಗಳು ಮುದ್ರಿತವಾಗುತ್ತಿರುವ ಸಂದರ್ಭದಲ್ಲಿ ಎಲ್ಲವನ್ನೂ ಒಂದೆಡೆ ಕಾಣುವುದು ದುರ್ಲಭವಾಗಿರುವುದರಿಂದ ಒಂದೆಡೆ ಸೇರಿಸುವ ಯೋಜನೆ ಇದು. ಪ್ರತಿಷ್ಠಾನ ಪುಸ್ತಕಗಳನ್ನು ಕೊಳ್ಳುವಷ್ಟು ಶ್ರೀಮಂತವಾಗಿಲ್ಲದಿರುವುದರಿಂದ ದಾನರೂಪವಾಗಿ ಸಂಗ್ರಹಿಸಲು ಪ್ರಯತ್ನಿಸುತ್ತಿದೆ. (ಈಗಾಗಲೆ ಹಲವಾರು ಕವಿಗಳು, ಪ್ರಕಾಶಕರು ಈ ನಿಟ್ಟಿನಲ್ಲಿ ಸಹಾಯ ಮಾಡಿದ್ದಾರೆ.) ಕವಿಗಳು ತಮ್ಮ ಹೊಸ ಪ್ರಕಟನೆಗಳ, ಒಂದು ಪ್ರತಿಯನ್ನು ಕಳಿಸಿಕೊಡಬೇಕಾಗಿ ವಿನಂತಿ.

2. **ಶ್ರೀ ಪದಕ ಕವನ ಸ್ಪರ್ಧೆ:** ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಇಂಥ ದೊಂದು ಯೋಜನೆಯನ್ನು ಶ್ರೀಯವರೇ ಪ್ರಾರಂಭಿಸಿದ್ದರು. ಹತ್ತಿಪ್ಪತ್ತು ವರ್ಷ ಈ ಸ್ಪರ್ಧೆ ಯಶಸ್ವಿಯಾಗಿ ನಡೆಯಿತು. ನಾನಾಕಾರಣಗಳಿಂದ ಇದು ಕ್ರಮವಾಗಿ ನಡೆಯುತ್ತಿಲ್ಲ. ಕಾಲೋಚಿತವಾಗಿ ಹೊಸ ದೃಷ್ಟಿಕೋನ ಇಟ್ಟುಕೊಂಡು, ಹೊಸ ಕವಿಗಳನ್ನು ಗುರುತಿಸಿ ಪ್ರಕಾಶಿಸುವ ಸಲುವಾಗಿ ಬಿ. ಎಂ. ಶ್ರೀ. ಜನ್ಮಶತಮಾ ನೋತ್ಸವದ ನೆನಪಿಗಾಗಿ ಈ ಸ್ಪರ್ಧೆಯನ್ನು ಏರ್ಪಡಿಸಲು ಉದ್ದೇಶಿಸಿದೆ.

3. ವಾಚನ ಮಾಡಿದ ಉತ್ತಮ ಕವಿತೆಗಳನ್ನು ಮತ್ತು ಇತರ ಹೊಸಕವಿಗಳ ಕವಿತೆಗಳನ್ನು, ಕಾವ್ಯವನ್ನು ಕುರಿತಾದ ಚರ್ಚೆಗಳನ್ನು ಒಳಗೊಂಡ, ಕಾವ್ಯಕ್ಕೆ ಮಾತ್ರ ಮೀಸಲಾದ '**ಕಾವ್ಯಪತ್ರಿಕೆ**'ಯನ್ನು ಸಹೃದಯಗೋಷ್ಠಿಯು ವತಿಯಿಂದ ಪ್ರಕಟಿಸುವ ಉದ್ದೇಶ ಇದೆ. ಈ ಎಲ್ಲ ಯೋಜನೆಗಳು ಕಾರ್ಯಗತವಾಗಬೇಕಾದರೆ ಅಭಿಮಾನಿಗಳು, ಸಹೃದಯರು ಸಹಕರಿಸಬೇಕು. ಸಾಮಾನ್ಯ (10 ರೂ), ಆಜೀವ (100 ರೂ) ಸದಸ್ಯರಾಗುವುದರ ಮೂಲಕ ಕಾವ್ಯಾಭಿಮಾನಿಗಳು ಸಹಾಯ ಮಾಡಬೇಕಾಗಿ ಪ್ರಾರ್ಥಿಸಿಕೊಳ್ಳಲಾಗಿದೆ.

ಪ್ರತಿಷ್ಠಾನದ ಸದಸ್ಯರು ಸಹೃದಯ ಗೋಷ್ಠಿಗೆ ಪ್ರತ್ಯೇಕ ಚಂದಾ ಕೊಡದೆ ಅದರ ಕಾರ್ಯಕಲಾಪಗಳಲ್ಲಿ ಅಗತ್ಯವಾಗಿ ಭಾಗವಹಿಸುವ ಅವಕಾಶ ಇರುವುದಾದರೂ, ಗೋಷ್ಠಿಯ ನಿಧಿಗೆ ಉದಾರವಾಗಿ ಧನ ಸಹಾಯ ಮಾಡಬೇಕೆಂದು ಪ್ರಾರ್ಥನೆ.

## ಹಸ್ತಪ್ರತಿ ಪ್ರದರ್ಶನ

ದಿನಾಂಕ 22-10-85 ರಿಂದ 24-10-85 ರವರೆಗೆ ಪ್ರತಿಷ್ಠಾನದ ಕಾರ್ಯಾಲಯದಲ್ಲಿ ಸರಸ್ವತಿ ಪೂಜೆಯ ಅಂಗವಾಗಿ ಹಸ್ತಪ್ರತಿಗಳ ಪ್ರದರ್ಶನವನ್ನು ವ್ಯವಸ್ಥೆ ಮಾಡಲಾಗಿತ್ತು. 22-10-85 ರಂದು ಬೆಳಗ್ಗೆ ಪ್ರತಿಷ್ಠಾನದ ಅಧ್ಯಕ್ಷರು ಈ ಪ್ರದರ್ಶನವನ್ನು ಉದ್ಘಾಟಿಸಿದರು. ಅನೇಕರು ಪ್ರದರ್ಶನವನ್ನು ವೀಕ್ಷಿಸಿ ಮೆಚ್ಚಿಗೆ ಸೂಚಿಸಿದ್ದಾರೆ.

## ವಿಶೇಷ ಉಪನ್ಯಾಸ

25-10-85 ರಂದು ಸಂಜೆ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯ ಸಭಾಂಗಣದಲ್ಲಿ ನವದೆಹಲಿಯ ಶಿಕ್ಷಣ ಸಚಿವಾಲಯದಲ್ಲಿ ಸಾರ್ವಜನಿಕ ಸಂಪರ್ಕಾಧಿಕಾರಿಯಾಗಿ ಭಾರತೀಯ ಭಾಷೆಗಳಿಗೆ ಏಕಲಿಪಿಯನ್ನು ವ್ಯವಸ್ಥೆಗೊಳಿಸುವ ಯೋಜನೆಯಲ್ಲಿ ನಿರತರಾಗಿರುವ ಶ್ರೀ ಸಂಗಮೇಶ್ವರ ಅವರಿಂದ "ಭಾರತೀಯ ಭಾಷೆಗಳಿಗೆ ಏಕಲಿಪಿ ವಿನ್ಯಾಸ" ವಿಷಯವನ್ನು ಕುರಿತು ಉಪನ್ಯಾಸವನ್ನು ಏರ್ಪಡಿಸಲಾಗಿತ್ತು. ಎಂ. ವಿ. ಸೀತಾರಾಮಯ್ಯನವರು ಸ್ವಾಗತಿಸಿದರು. ಎಂ. ಎ. ಸತ್ಯನಾರಾಯಣ ಅವರು ವಂದನಾರ್ಪಣೆ ಮಾಡಿದರು.

## ದತ್ತಿ ಉಪನ್ಯಾಸಗಳು

ಪ್ರತಿಷ್ಠಾನದಲ್ಲಿ ಸದ್ಯದಲ್ಲಿ ನಾಲ್ಕು ದತ್ತಿ ಉಪನ್ಯಾಸ ನಿಧಿಗಳು ಏರ್ಪಟ್ಟಿವೆ. ಈ ವರ್ಷ ಜಿ. ಪಿ. ರಾಜರತ್ನಂ ಅವರ ಮತ್ತು ಟಿ. ಎಸ್. ವೆಂಕಣ್ಣಯ್ಯನವರ ಸ್ಮಾರಕ ಉಪನ್ಯಾಸ ನಿಧಿಗಳಿಗೆ ವಂತಿಗೆ ಬಂದಿವೆ. ಈ ಸಂಬಂಧದ ಉಪನ್ಯಾಸಗಳನ್ನು ಮುಂದಿನ ವರ್ಷದಿಂದ ಪ್ರಾರಂಭಿಸಲಾಗುವುದು. ಕನಿಷ್ಠ ತಿಂಗಳಿಗೊಂದರಂತೆ ಹನ್ನೆರಡು ದತ್ತಿನಿಧಿಗಳನ್ನಾದರೂ ವ್ಯವಸ್ಥೆ ಮಾಡಬೇಕೆಂಬ ಉದ್ದೇಶವಿದೆ. ಪ್ರಸಕ್ತ ಸಾಲಿನಲ್ಲಿ ನಡೆದ ದತ್ತಿ ನಿಧಿ ಉಪನ್ಯಾಸಗಳ ವಿವರ ಈ ಕೆಳಕಂಡಂತಿವೆ.

## ಬಿ.ಎಂ.ಶ್ರೀ. ಸ್ಮಾರಕ ದತ್ತಿ ಉಪನ್ಯಾಸ

ಬಿ. ಎಂ. ಶ್ರೀ. ಅವರ ಮೊಮ್ಮಕ್ಕಳಾದ ಡಾ॥ ಎಸ್. ಜಿ. ಶ್ರೀಕಂಠಯ್ಯ ಅವರು ಸ್ಥಾಪಿಸಿರುವ ಈ ಉಪನ್ಯಾಸ ದಿನಾಂಕ 15-9-85 ರಂದು ಧಾರವಾಡದ ವಿದ್ಯಾವರ್ಧಕ ಸಂಘದ ಸಭಾಂಗಣದಲ್ಲಿ ಸಂಘದ ಸಹಯೋಗದೊಂದಿಗೆ ನಡೆಯಿತು. ಅಂದು ಡಾ॥ ಶ್ರೀನಿವಾಸ ಹಾವನೂರ ಅವರು "ಮುಂಬಯಿ ಕರ್ನಾಟಕದ ಇತಿಹಾಸ ನಿರ್ಮಿಸಿದ ಎಲಿಯಟ್ ಮತ್ತು ಫ್ಲೀಟರು" ಎಂಬ ವಿಷಯವನ್ನು ಕುರಿತು ಮನೋಜ್ಞ ಉಪನ್ಯಾಸವನ್ನು ನೀಡಿದರು. ತಾವು ಸಂಗ್ರಹಿಸಿದ್ದ ಎಲಿಯಟ್-ಫ್ಲೀಟರ ಕಾಲದ ಇತಿಹಾಸದ ದಾಖಲೆಗಳನ್ನು ಈ ಸಂದರ್ಭದಲ್ಲಿ ಪ್ರದರ್ಶಿಸಲಾಗಿತ್ತು. ಡಾ॥ ಷ. ಶೆಟ್ಟರ್ ಅವರು ಅಧ್ಯಕ್ಷತೆ ವಹಿಸಿದ್ದರು. ಸಂಘದ ಗೌ॥ ಕಾರ್ಯದರ್ಶಿಗಳಾದ ಶ್ರೀ ಸಿದ್ಧಲಿಂಗ ಪಟ್ಟಣಶೆಟ್ಟಿ ಅವರು ಸ್ವಾಗತಿಸಿದರು. ಪ್ರತಿಷ್ಠಾನದ ಕಾರ್ಯದರ್ಶಿಗಳಾದ

ಶ್ರೀ ಎಂ. ವಿ. ಸತ್ಯನಾರಾಯಣ ಅವರು ಪ್ರತಿಷ್ಠಾನದ ಪರಿಚಯವನ್ನು ಮಾಡಿ ಕೊಟ್ಟರು. ಈ ಕಾರ್ಯಕ್ರಮದಲ್ಲಿ ಹಲವಾರು ಸ್ಥಳೀಯ ಗಣ್ಯರು ಭಾಗವಹಿಸಿದ್ದರು.

## ಎಸ್. ಶ್ರೀಕಂಠಯ್ಯ ದತ್ತಿ ಉಪನ್ಯಾಸ

ಎಸ್. ಶ್ರೀಕಂಠಯ್ಯನವರ ಪುತ್ರರಾದ ಎಸ್. ರಾಮಚಂದ್ರ ಅವರು ಸ್ಥಾಪಿಸಿರುವ ಈ ಉಪನ್ಯಾಸವನ್ನು ಕರ್ನಾಟಕ ವಿಶ್ವವಿದ್ಯಾನಿಲಯದ ನಿವೃತ್ತ ಇತಿಹಾಸ ಪ್ರಾಧ್ಯಾಪಕರಾದ ಡಾ॥ ಜಿ. ಎಸ್. ದೀಕ್ಷಿತ್ ಅವರು 21-12-85 ಶನಿವಾರ ಸಂಜೆ ನರಸಿಂಹರಾಜ ಕಾಲೊನಿ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯ ಸಭಾಂಗಣದಲ್ಲಿ ನೀಡಿದರು. ಸಂಸ್ಥೆಯ ಸಹಯೋಗದೊಂದಿಗೆ ನಡೆದ ಈ ಉಪನ್ಯಾಸದ ವಿಷಯ "ಕೃಷ್ಣದೇವರಾಯ ಮತ್ತು ಕನ್ನಡ ಸಂಸ್ಕೃತಿ". ಪ್ರೊ॥ ಎಂ.ವಿ.ಸೀ. ಅವರು ಡಾ॥ ದೀಕ್ಷಿತರ ಪರಿಚಯ ಮಾಡಿಕೊಟ್ಟು, ಎಲ್ಲರಿಗೂ ಸ್ವಾಗತ ಬಯಸಿದರು.

## ಡಾ॥ ಶಂ. ಬಾ. ಜೋಶಿ ಗೌರವ ಉಪನ್ಯಾಸ

ಡಾ॥ ಶಂ. ಬಾ. ಜೋಶಿ ಸನ್ಮಾನ ಸಮಿತಿ ಮತ್ತು ಜೋಶಿಯವರ ಪುತ್ರರಾದ ಡಾ॥ ಮಧುಸೂದನ ಜೋಶಿ ಅವರುಗಳ ನೆರವಿನಿಂದ ಸ್ಥಾಪಿಸಿರುವ ಈ ಉಪನ್ಯಾಸ ವನ್ನು ಶ್ರೀ ಮಲ್ಲೇಪುರಂ ಜಿ. ವೆಂಕಟೇಶ ಅವರು ನೀಡಿದರು. ಮಲ್ಲೇಶ್ವರದ ಗಾಂಧಿ ಸಾಹಿತ್ಯ ಸಂಘದ ಸಭಾಂಗಣದಲ್ಲಿ ಸಂಘದ ಸಹಯೋಗದೊಂದಿಗೆ 22-12-85ರಂದು ಭಾನುವಾರ ಸಂಜೆ 'ಮನು : ವೈವಸ್ವತ, ನರ : ಸ್ವಾಯಂಭುವ–ಒಂದು ತೌಲನಿಕ ವಿವೇಚನೆ' ಎಂಬ ವಿಷಯವನ್ನು ಕುರಿತು ಶಂಬಾ ಅವರ 'ಮನು' ಚಿಂತನೆಯ ಮೇಲೆ ವಿಶೇಷ ಅಧ್ಯಯನ ಮಾಡುತ್ತಿರುವ ಮಲ್ಲೇಪುರಂ ಜಿ. ವೆಂಕಟೇಶ್ ಅವರು ಸಂಶೋಧನಾತ್ಮಕ ಉಪನ್ಯಾಸವನ್ನು ನೀಡಿದರು. ಪ್ರೊ॥ ಎಂ. ವಿ. ಸೀ. ಅವರ ಸ್ವಾಗತದೊಂದಿಗೆ ಆರಂಭವಾದ ಈ ಕಾರ್ಯಕ್ರಮ ಶ್ರೀ ನೀಲತ್ತಹಳ್ಳಿ ಕಸ್ತೂರಿ ಅವರ ವಂದನಾರ್ಪಣೆಯೊಂದಿಗೆ ಮುಗಿಯಿತು.

## ಬಿ. ಚಂದ್ರಶೇಖರಶರ್ಮ ದತ್ತಿ ಉಪನ್ಯಾಸ

23-12-85 ರಂದು ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯಲ್ಲಿ ಸಂಸ್ಥೆಯ ಸಹಯೋಗದೊಂದಿಗೆ, ಡಾ॥ ರಾಮಚಂದ್ರಶರ್ಮ ಅವರು ಸ್ಥಾಪಿಸಿರುವ ಈ ಉಪನ್ಯಾಸವನ್ನು ನಡಸಿಕೊಟ್ಟವರು ಪ್ರೊ॥ ಕೆ. ಟಿ. ಪಾಂಡುರಂಗಿ ಅವರು. ಮಿಥಿಕ್ ಸೊಸೈಟಿಯ ಅಧ್ಯಕ್ಷರೂ, ಸಂಸ್ಕೃತದ ನಿವೃತ್ತ ಪ್ರಾಧ್ಯಾಪಕರೂ ಆದ ಪಾಂಡುರಂಗಿ ಅವರು "ಕರ್ನಾಟಕದ ಸಂಸ್ಕೃತ ಕವಿಗಳು ಮತ್ತು ಕವಯಿತ್ರಿಯರು" ಎಂಬ ವಿಷಯದ ಮೇಲೆ ಪಾಂಡಿತ್ಯಪೂರ್ಣ ಉಪನ್ಯಾಸ ನೀಡಿದರು. ಎಂ. ವಿ. ಸೀತಾರಾಮಯ್ಯ ನವರು ಅತಿಥಿಗಳನ್ನು ಪರಿಚಯ ಮಾಡಿಕೊಟ್ಟು, ಸ್ವಾಗತ ಕೋರಿದರು.

### ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

## 5ನೆಯ ಸರ್ವಸದಸ್ಯರ ಸಭೆ

28-9-85 ಭಾನುವಾರ ಮಧ್ಯಾಹ್ನದ ಮೇಲೆ 4 ಗಂಟೆಗೆ ಪ್ರತಿಷ್ಠಾನದ ಕಾರ್ಯಾಲಯದಲ್ಲಿ ಸೇರಿದ್ದ ಐದನೆಯ ಸರ್ವಸದಸ್ಯರ ಸಾಧಾರಣ ವಾರ್ಷಿಕ ಸಭೆಯ ನಡವಳಿಕೆಯ ವರದಿ.

ಪ್ರತಿಷ್ಠಾನದ ಅಧ್ಯಕ್ಷರಾದ ಶ್ರೀ ನಿಟ್ಟೂರು ಶ್ರೀನಿವಾಸ ರಾವ್ ಅವರು ಸಭೆಯ ಅಧ್ಯಕ್ಷತೆ ವಹಿಸಿದ್ದರು.

**ಸಭೆಗೆ ಬಂದಿದ್ದವರು :**

ಸರ್ವಶ್ರೀ: ನಿಟ್ಟೂರು ಶ್ರೀನಿವಾಸ ರಾವ್, ಜಿ. ನಾರಾಯಣ, ಜಿ. ವೆಂಕಟಸುಬ್ಬಯ್ಯ, ಹೆಚ್. ಶ್ರೀಕಂಠಯ್ಯ, ಶ್ರೀಮತಿ ಕೆ. ಶಾಂತ, ಟಿ. ಕೇಶವಭಟ್ಟ, ಟಿ. ಎಸ್. ನಾಗಭೂಷಣ, ಎಂ. ವಿ. ಸೀತಾರಾಮಯ್ಯ, ಎಸ್. ಟಿ. ರಾಧಾಕೃಷ್ಣ, ಎಂ. ವಿ. ಸತ್ಯನಾರಾಯಣ, ಎ. ನರಸಿಂಹಮೂರ್ತಿ, ಕೆ. ಎಸ್. ಮಧುಸೂದನ, ನಾ. ಗೀತಾಚಾರ್ಯ, ಎಸ್. ವೆಂಕೋಬರಾವ್, ಎನ್. ಎಸ್. ರಾಮಸ್ವಾಮಿ ಅಯ್ಯರ್, ಡಾ॥ ಗುಂಡೂರಾವ್, ಜಿ. ಅಶ್ವತ್ಥನಾರಾಯಣ ಕೆ. ಎಂ. ಮುನಿಕೃಷ್ಣಪ್ಪ.

ಅಗತ್ಯವಾದ ಕೋರಂ ಇಲ್ಲದಿದ್ದರಿಂದ ತಿಳಿವಳಿಕೆ ಪತ್ರದಲ್ಲಿ ಮೊದಲೇ ಸೂಚಿಸಿದಂತೆ ಸಭೆಯನ್ನು ಅರ್ಧಗಂಟೆ ಮುಂದಕ್ಕೆ ಹಾಕಲಾಯಿತು. ಅದರಂತೆ ಮುಂದಕ್ಕೆ ಹಾಕಿದ್ದ ಸಭೆಯಲ್ಲಿ ಮೇಲೆ ನಮೂದಿಸಿದ ಸದಸ್ಯರು ಹಾಜರಿದ್ದರು.

ಪ್ರತಿಷ್ಠಾನದ ಅಧ್ಯಕ್ಷರಾದ ಶ್ರೀ ನಿಟ್ಟೂರು ಶ್ರೀನಿವಾಸ ರಾವ್ ಅವರು ಸಭೆಯಲ್ಲಿ ಹಾಜರಿದ್ದ ಎಲ್ಲ ಸದಸ್ಯರಿಗೂ ಸ್ವಾಗತವನ್ನು ಕೋರಿದ ಮೇಲೆ, ಅವರ ಸೂಚನೆಯ ಮೇರೆಗೆ ಪ್ರತಿಷ್ಠಾನದ ಸಂಸ್ಥಾಪಕ ಕಾರ್ಯದರ್ಶಿಗಳಾದ ಶ್ರೀ ಎಂ. ವಿ. ಸೀತಾರಾಮಯ್ಯನವರು ತಮ್ಮ ಪ್ರಾಸ್ತಾವಿಕ ಭಾಷಣದಲ್ಲಿ ಸದಸ್ಯರನ್ನು ಉದ್ದೇಶಿಸಿ, ಈ ಕೆಳಗಿನಂತೆ ವಿಜ್ಞಾಪನೆ ಮಾಡಿಕೊಂಡರು :—

"ಸದಸ್ಯರಿಗೆ ಈಗಾಗಲೇ ಕಳಿಸಿರುವ ವಾರ್ಷಿಕ ವರದಿಯಲ್ಲಿ ಹಾಗೂ "ಲೋಚನ" ಪತ್ರಿಕೆಯ ಸಂಚಿಕೆಗಳಲ್ಲಿ ಬಿ. ಎಂ. ಶ್ರೀ. ಜನ್ಮಶತಮಾನೋತ್ಸವದ ಕಾರ್ಯಕಲಾಪಗಳ ಸಂಕ್ಷಿಪ್ತ ವರದಿಯನ್ನು ಅಚ್ಚುಮಾಡಿದೆ. ಆದ್ದರಿಂದ, ಆ ಬಗ್ಗೆ ನಾನು ತಿಳಿಸಬೇಕಾದದ್ದು ಹೆಚ್ಚಿನ ಸಂಗತಿ ಏನೂ ಇಲ್ಲ. ಉತ್ಸವದ ಆಯವ್ಯಯ ಲೆಕ್ಕಗಳು ಆಡಿಟ್ ಆಗಿ ಸಿದ್ಧವಾದ ಕೂಡಲೆ ಅದನ್ನು ರಾಜ್ಯಸರ್ಕಾರದ ಕನ್ನಡ ಮತ್ತು ಸಂಸ್ಕೃತಿ

ಇಲಾಖೆಗೆ ಕಳಿಸಿಕೊಡಲಾಗುವುದು. ಒಟ್ಟಿನಲ್ಲಿ ಹೇಳುವುದಾದರೆ, ಸರ್ಕಾರ ನೀಡಿದ ಒಂದು ಲಕ್ಷ ರೂಪಾಯಿಗಳ ಮೇಲೆ ಸುಮಾರು ಅರ್ಧಲಕ್ಷವನ್ನು ಪ್ರತಿಷ್ಠಾನ ತನ್ನ ಹಣದಿಂದ ವೆಚ್ಚಮಾಡಿದೆ.

"ಈ ಸಂದರ್ಭದಲ್ಲಿ, ಮುಖ್ಯವಾಗಿ ಉತ್ಸವಕ್ಕೆ ಉದಾರವಾಗಿ ಧನಸಹಾಯ ಮಾಡಿದ ರಾಜ್ಯಸರ್ಕಾರಕ್ಕೂ ಉತ್ಸವದ ಕಾರ್ಯಾಧ್ಯಕ್ಷರಾಗಿ ಅದನ್ನು ಅತ್ಯಂತ ಯಶಸ್ವಿಯಾಗಿ ನಡಸಿಕೊಟ್ಟ ಶ್ರೀಮಾನ್ ಜಿ. ನಾರಾಯಣ ಅವರಿಗೂ ನಾವು ಕೃತಜ್ಞರು. ನಮ್ಮ ಕೃತಜ್ಞತೆಯನ್ನು ಇಲ್ಲಿ ಉಲ್ಲೇಖಿಸುವುದು ನಮ್ಮ ಸಂತೋಷದ ಕರ್ತವ್ಯ.

"ಕೇಂದ್ರಸರ್ಕಾರ ರೂಪಿಸಿರುವ ಪ್ರಾಚೀನ ಹಸ್ತಪ್ರತಿಗಳ ಪ್ರಕಟನೆಯ ಯೋಜನೆಗೆ ಅನುಸಾರವಾಗಿ 1983–84, 1984–85, ಈ ಎರಡು ವರ್ಷಗಳಿಗೆ ಸಂಬಂಧಪಟ್ಟಂತೆ ಅರ್ಜಿಗಳನ್ನು ರಾಜ್ಯಸರ್ಕಾರದ ಮೂಲಕ ಸಲ್ಲಿಸಿದ್ದೆವು. ರಾಜ್ಯ ಸರ್ಕಾರ ಅರ್ಜಿಗಳನ್ನು ಕೇಂದ್ರಸರ್ಕಾರಕ್ಕೆ ರವಾನಿಸುವಲ್ಲಿ ತಡವಾದದ್ದರಿಂದ ಎರಡೂ ವರ್ಷವೂ ಈ ಸಂಬಂಧದ ಅನುದಾನ ದೊರೆಯುವುದು ತಪ್ಪಿಹೋಯಿತು.

"ಶ್ರೀ ಜನ್ಮಶತಮಾನ ವರ್ಷದಲ್ಲಿಯೇ ಬೆಂಗಳೂರಿನಲ್ಲಿ ಶ್ರೀಭವನ ನಿರ್ಮಾಣ ಸಂಬಂಧದಲ್ಲಿ ನಿವೇಶನವನ್ನು ದೊರಕಿಸಿಕೊಳ್ಳಲು ಪ್ರಯತ್ನಿಸಿದ್ದೆವು. ಈ ಸಂಬಂಧ ವಾಗಿಯೂ, ಬೆಳ್ಳೂರು ಹಾಗೂ ಸಂಪಿಗೆಗಳಲ್ಲಿ ಶ್ರೀ ಸ್ಮಾರಕ ನಿರ್ಮಾಣ ವಿಚಾರ ವಾಗಿಯೂ ಮುಖ್ಯಮಂತ್ರಿಗಳಿಗೆ ಅರಿಕೆ ಮಾಡಿಕೊಂಡಿದ್ದೆವು. ಈ ಸಂಬಂಧದಲ್ಲಿ ಸೂಕ್ತ ಗಮನಕೊಡಲಾಗುವುದೆಂದು ಮುಖ್ಯಮಂತ್ರಿಗಳು ಭರವಸೆ ಕೊಟ್ಟಿರುತ್ತಾರೆ. ಒಂದು ನಿವೇಶನ ಸದ್ಯದಲ್ಲಿಯೇ ದೊರೆಯುವ ಸಾಧ್ಯತೆ ಇದೆ.

"ದಿವಂಗತ ಪ್ರೊಫೆಸರ್ ಟಿ. ಎಸ್. ವೆಂಕಣ್ಣಯ್ಯನವರು ಬಿ ಎಂ.ಶ್ರೀ. ಅವರ ಕನ್ನಡದ ಕೆಲಸದಲ್ಲಿ ಅವರಿಗೆ ಎಲ್ಲ ವಿಧದಲ್ಲಿಯೂ ಕ್ರಿಯಾಶೀಲವಾಗಿ ನೆರವಾಗುತ್ತಿದ್ದ ಮಹನೀಯರು. ಮೈಸೂರು ವಿಶ್ವವಿದ್ಯಾನಿಲಯದ ಪ್ರಥಮ ಕನ್ನಡ ಪ್ರಾಧ್ಯಾಪಕರು. ಈಗ ಬಿ. ಎಂ. ಶ್ರೀ. ಪ್ರತಿಷ್ಠಾನದ ಗೌರವ ಸದಸ್ಯರಲ್ಲಿ ಕೆಲವರು ಅವರ ಆಪ್ತ ಶಿಷ್ಯರು. ಸದಸ್ಯರಲ್ಲಿ ಹಲಕೆಲವರು ಅವರ ಶಿಷ್ಯಪ್ರಶಿಷ್ಯರು. ಹೀಗಿರುತ್ತಾ, ಅವರ ಶತಮಾನೋತ್ಸವವನ್ನು ಬಿ. ಎಂ. ಶ್ರೀ. ಪ್ರತಿಷ್ಠಾನ ನೆರವೇರಿಸುವುದು ಕೇವಲ ಉಚಿತವಾಗಿದೆ ಎಂದು ಭಾವಿಸಿ, ಕಾರ್ಯಸಮಿತಿ ಜನ್ಮಶತಮಾನೋತ್ಸವವನ್ನು ನೆರವೇರಿಸಲು ಒಂದು ಉಪಸಮಿತಿಯನ್ನು ನೇಮಕ ಮಾಡಿತು. ಅದರ ತೀರ್ಮಾನ ಗಳಿಗೆ ಅನುಸಾರವಾಗಿ ವೆಂಕಣ್ಣಯ್ಯನವರ ಹುಟ್ಟೂರಾದ ತಳುಕು, ಮತ್ತು ಚಳ್ಳಕೆರೆ, ಚಿತ್ರದುರ್ಗಗಳಲ್ಲಿ ಸ್ಥಳೀಯರ ಸಹಕಾರದೊಂದಿಗೆ ಉತ್ಸವವನ್ನು ನಡಸಲಾಗುವುದು. ವೆಂಕಣ್ಣಯ್ಯನವರ ಬಂಧುಗಳಾದ ಶ್ರೀಯುತ ಬೆಳಗೆರೆ ಕೃಷ್ಣಶಾಸ್ತ್ರಿಗಳು, ವೆಂಕಣ್ಣಯ್ಯ ನವರ ಜನ್ಮಶತಮಾನೋತ್ಸವದ ನೆನಪಿಗಾಗಿ ಪ್ರತಿಷ್ಠಾನದಲ್ಲಿ ದತ್ತಿ ಉಪನ್ಯಾಸ ನಿಧಿ ಯನ್ನು ಸ್ಥಾಪಿಸಲು ಈಗಾಗಲೇ ಒಂದು ಸಾವಿರ ರೂಪಾಯಿಗಳ ಕಾಣಿಕೆಯನ್ನು

ನೀಡಿರುತ್ತಾರೆ. ಇನ್ನೂ 4,000 ರೂಪಾಯಿಗಳನ್ನು ಸಂಗ್ರಹಿಸಿ ನಿಧಿಗೆ ಕೊಡುವುದಾಗಿ ಆಶ್ವಾಸನೆ ನೀಡಿರುತ್ತಾರೆ. ಉತ್ಸವವನ್ನು ಬೆಂಗಳೂರಿನಲ್ಲೂ ನಡಸಲಾಗುವುದು. ಉತ್ಸವವನ್ನು ನಡಸಲು 50,000 ರೂಪಾಯಿಗಳ ವೆಚ್ಚದ ಅಂದಾಜನ್ನು ತಯಾರಿಸಿದೆ. (ಯೋಜನೆಯಂತೆ ನಡೆದರೆ ಇದು ಒಂದು ಲಕ್ಷ ಆಗಬಹುದು) ಈ ಮೊತ್ತವನ್ನು ಸಹಾಯಧನವಾಗಿ ನೀಡುವಂತೆ ರಾಜ್ಯಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಮನವಿಯನ್ನು ಸಲ್ಲಿಸಲಾಗುವುದು. ಸರ್ಕಾರದಿಂದ ಧನಸಹಾಯವು ದೊರೆಯುವಲ್ಲಿ ವಿಳಂಬವಾಗುವ ಕಾರಣ ಪೂರ್ವಭಾವಿ ವೆಚ್ಚಕ್ಕೆ 10,000 ರೂಪಾಯಿಗಳನ್ನು ಬಳಸಿಕೊಳ್ಳಲು ನಿರ್ಧರಿಸಿದೆ. ಈ ನಿರ್ಧಾರಕ್ಕೆ ಸದಸ್ಯರು ಒಪ್ಪಿಗೆಯನ್ನು ನೀಡಬೇಕು. (ಸದಸ್ಯರು ತಮ್ಮ ಒಪ್ಪಿಗೆಯನ್ನು ಸರ್ವಾನುಮತದಿಂದ ಸೂಚಿಸಿದರು.)

"ಸಂಸ್ಥಾಪಕ ಕಾರ್ಯದರ್ಶಿಯವರು ತಮ್ಮ ಮಾತನ್ನು ಮುಂದುವರಿಸಿ, ಜನ್ಮ ಶತಮಾನೋತ್ಸವದ ಅಂಗವಾಗಿ ಬೆಂಗಳೂರಿನಲ್ಲಿ ಗ್ರಂಥ ಸಂಪಾದನಾಶಾಸ್ತ್ರ ವಿಚಾರವಾಗಿ ಒಂದು ಶಿಕ್ಷಣ ಶಿಬಿರವನ್ನು ನಡಸಲು 30,000 ರೂಪಾಯಿಗಳ ಯೋಜನೆಯನ್ನು ಕೇಂದ್ರಸರ್ಕಾರಕ್ಕೆ ಸಲ್ಲಿಸಿದೆ. ಮತ್ತು ಈ ಶತಮಾನೋತ್ಸವ ವರ್ಷದಲ್ಲಿಯೇ ಕುಮಾರ ವ್ಯಾಸಭಾರತ ಸಂಗ್ರಹವನ್ನು ಪ್ರಕಟಿಸಬೇಕೆಂಬ ಉದ್ದೇಶವಿರುವುದರಿಂದ ಈಗಾಗಲೇ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಸಲ್ಲಿಸಿರುವ ಆ ಸಂಬಂಧದ ಯೋಜನೆಯನ್ನು ಬೇಗ ಮಂಜೂರು ಮಾಡಬೇಕೆಂದು ಇಲಾಖೆಯನ್ನು ಪ್ರಾರ್ಥಿಸಿಕೊಂಡಿದೆ."

ಅನಂತರ ನಿವೇಶನ ದೊರೆತ ಮೇಲೆ ಕಟ್ಟಬೇಕೆಂದಿರುವ ಕಟ್ಟಡನಿಧಿಗೆ ಸಾರ್ವಜನಿಕರು ಮಾತ್ರವಲ್ಲದೆ ಪ್ರತಿಷ್ಠಾನದ ಸದಸ್ಯರು ಉದಾರವಾಗಿ ಧನಸಹಾಯ ಮಾಡಬೇಕೆಂದು ಕೋರಿದರು. ಈ ಸಂಬಂಧದಲ್ಲಿ ಒಂದು ಮನವಿಯನ್ನು ಎಲ್ಲ ಸದಸ್ಯರಿಗೂ ಕಳಿಸಲಾಗುವುದೆಂದೂ ತಿಳಿಸಿದರು,

1. **ವರದಿಯ ಅಂಗೀಕಾರ:** ಸಂಸ್ಥಾಪಕ ಕಾರ್ಯದರ್ಶಿಯವರ ಭಾಷಣ ಮುಗಿದ ಮೇಲೆ, ಸಭಾಧ್ಯಕ್ಷರು ಕಾರ್ಯಸೂಚಿಯಲ್ಲಿ ನಮೂದಿಸಿರುವಂತೆ ವರದಿಯನ್ನು ಸಭೆಯ ಚರ್ಚೆ ಮತ್ತು ಅನುಮೋದನೆಗೆ ಮಂಡಿಸಿದರು. ವರದಿಯನ್ನು ಅನುಮೋದಿಸಬಹುದೆಂದು ಪ್ರೊ॥ ಜಿ. ವೆಂಕಟಸುಬ್ಬಯ್ಯನವರು ಸೂಚಿಸಿದರು. ಶ್ರೀ ಎಚ್. ಶ್ರೀಕಂಠಯ್ಯನವರು ಅನುಮೋದಿಸಿದರು. ವರದಿ ಸರ್ವಾನುಮತದಿಂದ ಅಂಗೀಕೃತವಾಯಿತು,

2. **ಆಯ-ವ್ಯಯ ಲೆಕ್ಕಗಳ ಅಂಗೀಕಾರ:** ಅನಂತರ ಆಯ - ವ್ಯಯಗಳಿಗೆ ಸಂಬಂಧಪಟ್ಟ ಆಡಿಟ್ ಆದ ಲೆಕ್ಕಗಳನ್ನೂ ಪ್ರಸಕ್ತ ವರ್ಷದ ಆಯವ್ಯಯದ ಅಂದಾಜು ಪಟ್ಟಿಯನ್ನೂ ಸಭೆಯ ಮುಂದೆ ಮಂಡಿಸಲಾಯಿತು. ಅನುಮೋದಿಸಬಹುದೆಂದು

ಡಾ॥ ಮಧುಗಿರಿ ಗುಂಡೂರಾಯರು ಸೂಚಿಸಿದರು. ಶ್ರೀ ಜಿ. ಅಶ್ವತ್ಥನಾರಾಯಣ ಅವರು ಸೂಚನೆಯನ್ನು ಅನುಮೋದಿಸಿದರು.

3. **ಲೆಕ್ಕಪರಿಶೋಧಕರ ನೇಮಕ:** ಕಳೆದ ವರ್ಷಗಳಲ್ಲಿ ಲೆಕ್ಕವನ್ನು ಪರಿಶೋಧನೆ ಮಾಡಿಕೊಟ್ಟಿರುವ ಶ್ರೀ ಎಸ್. ಆರ್. ಆರ್. ಕೆ. ಶರ್ಮ ಅವರನ್ನೇ ಪ್ರಸಕ್ತ ವರ್ಷಕ್ಕೂ ಲೆಕ್ಕ ಪರಿಶೋಧಕರನ್ನಾಗಿ ನೇಮಿಸಬಹುದೆಂದೂ ಮತ್ತು ಕಳೆದ ವರ್ಷ ನೀಡಿದಷ್ಟೇ ಸಂಭಾವನೆಯನ್ನು ನೀಡಬಹುದೆಂದೂ ಅವರು ಸೂಚಿಸಿದರು. ಸೂಚನೆಯನ್ನು ಶ್ರೀ ಜಿ. ಅಶ್ವತ್ಥನಾರಾಯಣ ಅವರು ಅನುಮೋದಿಸಿದರು. ಸೂಚನೆ ಸರ್ವಾನುಮತದಿಂದ ಅಂಗೀಕೃತವಾಯಿತು,

**ಕಾರ್ಯಸಮಿತಿಯ ಸದಸ್ಯರ ಚುನಾವಣೆ:** ಈ ಸಂಬಂಧದ ನಿಯಮಾವಳಿಯನ್ನು ಗಮನಕ್ಕೆ ತಂದುಕೊಂಡು ಅದರ ಪ್ರಕಾರ ನಿವೃತ್ತರಾಗಬೇಕಾದವರ ಹೆಸರುಗಳನ್ನು ಗಮನಿಸಲಾಯಿತು. ಅವರುಗಳು ಯಾರೆಂದರೆ :

1. ಡಾ॥ ಎಂ. ಎಂ. ಕಲಬುರ್ಗಿ
2. ಪ್ರೊ॥ ಜಿ. ವೆಂಕಟಸುಬ್ಬಯ್ಯ
3. ಶ್ರೀ ಕೆ. ಆರ್. ಗಣೇಶ
4. ಡಾ॥ ಸಿದ್ದಯ್ಯ ಪುರಾಣಿಕ (ದಾನಿ ಸದಸ್ಯರ ಪರವಾಗಿ)

ಈ ನಾಲ್ವರನ್ನೇ ಪುನಃ ಚುನಾಯಿಸಬಹುದೆಂದು ಶ್ರೀ ಎಸ್. ವೆಂಕೋಬರಾಯರು ಸೂಚಿಸಿದರು. ಶ್ರೀ ಟಿ. ಕೇಶವಭಟ್ಟರು ಅನುಮೋದಿಸಿದರು. ಸೂಚನೆ ಸರ್ವಾನುಮತದಿಂದ ಅಂಗೀಕೃತವಾಯಿತು.

**ಇತರ ವಿಚಾರಗಳು:** ವರದಿಯಲ್ಲಿ ಪ್ರಸ್ತಾಪಿಸಿರುವ ವಿಷಯಗಳ ಸಂಬಂಧವಾಗಿ ಪರಿವಿಡಿಯನ್ನು ಮುಂದಿನ ವರದಿಗಳಲ್ಲಿ ಪ್ರಕಟಿಸಿದರೆ ಅನುಕೂಲವೆಂದು ಶ್ರೀ ಜಿ. ಅಶ್ವತ್ಥನಾರಾಯಣ ಅವರು ಅಭಿಪ್ರಾಯಪಟ್ಟರು. ಇದನ್ನು ಗಮನಿಸಲಾಗುವುದೆಂದು ಸಭಾಧ್ಯಕ್ಷರು ತಿಳಿಸಿದರು. ಅನಂತರ ಗುಲ್ಬರ್ಗದ ಪ್ರೊ॥ ವಸಂತಕುಷ್ಟಗಿ ಅವರು ಬರೆದು ಕಳಿಸಿರುವ ಸಲಹೆ ಸೂಚನೆಗಳನ್ನು ಸಂಸ್ಥಾಪಕ ಕಾರ್ಯದರ್ಶಿಯವರು ಸಭೆಗೆ ಓದಿ ತಿಳಿಸಿದರು. ಅವುಗಳು ಈ ರೀತಿ ಇವೆ :

ಪ್ರೊ॥ ವಸಂತ ಕುಷ್ಟಗಿಯವರು ದಿನಾಂಕ 28-9-85 ರಂದು ನಡೆಯಲಿರುವ ಸರ್ವಸದಸ್ಯರ ಸಭೆಯಲ್ಲಿ ಪರ್ಯಾಲೋಚನೆಗಾಗಿ ಕಳಿಸಿರುವ ಸೂಚನೆಗಳು :

1. ಪ್ರತಿಷ್ಠಾನಕ್ಕೆ ಹೊಸದಾಗಿ ಸದಸ್ಯರನ್ನು ಮಾಡಿಕೊಳ್ಳುವಾಗ, ಅಂತಹ ಸನ್ಮಾನ್ಯರಿಗೆ ಸದಸ್ಯತ್ವದ ಪ್ರವೇಶಪತ್ರವು ಈಗಾಗಲೇ ಪ್ರತಿಷ್ಠಾನದ ಸದಸ್ಯರಾಗಿರುವವರ ಮುಖಾಂತರ ದೊರಕಬೇಕು. ಇಲ್ಲವೆ ಈಗಾಗಲೇ ಸದಸ್ಯರಾಗಿರುವವರ ಶಿಫಾರಸ್ಸಿನೊಡನೆ ಅಂತಹ ಸದಸ್ಯತ್ವದ ಪ್ರವೇಶಪತ್ರವನ್ನು ಸಂಸ್ಥೆಯು ಸ್ವೀಕರಿಸ

ಬೇಕು. ಅನಂತರ ಆ ಪ್ರವೇಶ ಪತ್ರವನ್ನು ಕಾರ್ಯಸಮಿತಿಯಲ್ಲಿ ಮಂಡಿಸಿ ಒಪ್ಪಿಗೆ ಪಡೆದ ನಂತರ ಅಂತಹವರಿಗೆ ಸದಸ್ಯತ್ವದ ಮಂತಿಕೆ ಕಟ್ಟಲು ತಿಳಿಸಬೇಕು.

2. ಪ್ರತಿಷ್ಠಾನದ ಕೆಲಸವು ಬೆಂಗಳೂರಿಗೇ ಸೀಮಿತವಾಗಿಲ್ಲವಾದ ಕಾರಣ, ಸಂಶೋಧನೆ ಇತ್ಯಾದಿ ಕಾರ್ಯಗಳನ್ನು ಅದು ಹಮ್ಮಿಕೊಂಡಿರುವುದರಿಂದ ಒಂದೊಂದು ಜಿಲ್ಲೆಯಿಂದ ಒಬ್ಬೊಬ್ಬರನ್ನು ಕಾರ್ಯಸಮಿತಿಯ ಸದಸ್ಯರೆಂದು ಸ್ವೀಕರಿಸಲು ನಾಮಕರಣ ಮಾಡುವುದು ಸೂಕ್ತ.

ಇಂತಹ ಸದಸ್ಯರು ಸಾಹಿತ್ಯಾಸಕ್ತರು, ಸಂಶೋಧಕರು, ಬರಹಗಾರರು, ಸಂಘಟನಾಕಾರರೂ ಆಗಿದ್ದರೆ ಚೆನ್ನಾಗಿರುತ್ತದೆ.

3. ಪ್ರತಿಷ್ಠಾನದ ಉಪಕೇಂದ್ರಗಳನ್ನು ಧಾರವಾಡ, ಮೈಸೂರು, ಕಲಬುರ್ಗಿ, ಮಂಗಳೂರುಗಳಲ್ಲಿ ಹಂತಹಂತಗಳಲ್ಲಿ ಸ್ಥಾಪಿಸುವುದು ಉಚಿತವಾಗಿರುತ್ತದೆ.

4. ಕಲಬುರ್ಗಿಯಲ್ಲಿ ಹಿಂದೆ ಜರುಗಿದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರು ಬಿ. ಎಂ. ಶ್ರೀ. ಆಗಿದ್ದರು. ಆದ್ದರಿಂದ ಈ ವರ್ಷ ಪ್ರತಿಷ್ಠಾನದ ಪರಿಧಿಯಲ್ಲಿರುವ ಒಂದು ದತ್ತಿ ಉಪನ್ಯಾಸವನ್ನು ಕಲಬುರ್ಗಿಯಲ್ಲಿ ಏರ್ಪಡಿಸಬೇಕೆಂದು ವಿನಂತಿಸಿಕೊಳ್ಳ ಲಾಗುತ್ತಿದೆ.

5. ದತ್ತಿ ಉಪನ್ಯಾಸಗಳಿಗಾಗಲಿ, ವಿಶೇಷ ಉಪನ್ಯಾಸಗಳಿಗಾಗಲಿ, ಪಂಡಿತ ರನ್ನು ನಾಡಿನ ಒಂದು ಭಾಗದವರನ್ನು ಮತ್ತೊಂದು ಭಾಗದಲ್ಲಿ ನಡೆಯುವ ಪ್ರತಿಷ್ಠಾನದ ಕಾರ್ಯಕ್ರಮಗಳಿಗೆ ಆಹ್ವಾನಿಸಬೇಕು. ಎಂದರೆ ಕಲಬುರ್ಗಿ ಭಾಗ ದವರನ್ನೂ ಬೆಂಗಳೂರಿನ ಭಾಗಕ್ಕೋ ಮಂಗಳೂರಿನ ಭಾಗಕ್ಕೋ ; ಆ ಭಾಗಗಳಿಂದ ಪಂಡಿತರನ್ನು ಕಲಬುರ್ಗಿ ಭಾಗಕ್ಕೋ, ಧಾರವಾಡದ ಭಾಗಕ್ಕೋ ಆಹ್ವಾನಿಸಬೇಕು. ಎಂದರೆ ನಾಡಿನ ಎಲ್ಲ ಭಾಗಗಳ ಪ್ರತಿಭೆಯು ಎಲ್ಲ ಭಾಗಕ್ಕೂ ಮುಟ್ಟಿದಂತಾಗುತ್ತದೆ.

ಈ ಸೂಚನೆಗಳನ್ನು ಕಾರ್ಯಸಾಧ್ಯವಾದಂತೆಲ್ಲಾ ನಡಸಲು ಸಂದರ್ಭಾನುಸಾರ ಅಗತ್ಯವಾದ ಕಾರ್ಯವನ್ನು ಕೈಗೊಳ್ಳಬಹುದಾಗಿದೆ. ಸಭಾಧ್ಯಕ್ಷರು ಮೇಲ್ಕಂಡಂತೆ ತಮ್ಮ ಅಭಿಪ್ರಾಯಗಳನ್ನು ತಿಳಿಸಿದ ಮೇಲೆ ಅವರಿಗೆ ಸಂಸ್ಥಾಪಕ ಕಾರ್ಯದರ್ಶಿಯವರು ಸಭೆಯ ಪರವಾಗಿ ವಂದನೆ ಸಮರ್ಪಿಸಿದರು. ವಂದನಾರ್ಪಣೆಯೊಂದಿಗೆ ಸಭೆ ಮುಕ್ತಾಯವಾಯಿತು.

**ಎಂ. ವಿ. ಸೀತಾರಾಮಯ್ಯ**
ಸಂಸ್ಥಾಪಕ ಕಾರ್ಯದರ್ಶಿ

**ನಿಟ್ಟೂರು ಶ್ರೀನಿವಾಸ ರಾವ್**
ಸಭಾಧ್ಯಕ್ಷರು

**ಜಿ. ಎಸ್. ವೆಂಕಟರಾಜು**
**ಎಂ. ವಿ. ಸತ್ಯನಾರಾಯಣ**
ಗೌ॥ ಕಾರ್ಯದರ್ಶಿಗಳು.

# ಪ್ರತಿಷ್ಠಾನದ ಹೊಸ ಸದಸ್ಯರು

**ಆಜೀವ ಸದಸ್ಯರು**

1. ಡಾ॥ ಪಾ. ಶ. ಶ್ರೀನಿವಾಸ, ಕನ್ನಡ ವಿಭಾಗದ ಮುಖ್ಯಸ್ಥರು, ಕಾಮರಾಜ ವಿಶ್ವವಿದ್ಯಾಲಯ, ಮಧುರೆ. 2. ಡಾ॥ ಕೆ. ಶ್ರೀಕಂಠಯ್ಯ, "ಕೃಷ್ಣಕೃಪ" 393, ಜಯನಗರ, 1ನೇ ಬ್ಲಾಕ್, ಬೆಂಗಳೂರು-560011. 3. ಶ್ರೀ ಟಿ. ಕೇಶವಭಟ್ಟ, 754, 15ನೇ ಮುಖ್ಯರಸ್ತೆ, 2ನೇ ಹಂತ. ಬನಶಂಕರಿ, ಬೆಂಗಳೂರು-560070. 4. ಶ್ರೀ ಹೊ. ಶ್ರೀನಿವಾಸಯ್ಯ, 43, 6ನೇ ಕ್ರಾಸ್, ಮಲ್ಲೇಶ್ವರ, ಬೆಂಗಳೂರು-560003. 5. ಶ್ರೀ ವೇಣುಗೋಪಾಲ ಸೊರಬ, ನಂ. 86 (27) ಅಜಾದ್ ನಗರ, ಕನಕಪುರ-562117. 6. ಶ್ರೀ ಕೆ. ಎ. ಸೋಮಯ್ಯ, (ವಿಳಾಸ ಕೊಟ್ಟಿಲ್ಲ) 7. ಶ್ರೀ ಎಚ್. ಎಸ್. ಸತ್ಯನಾರಾಯಣರಾವ್, 1017 (ಮಹಡಿ) 8ನೇ ಕ್ರಾಸ್, ಬನಶಂಕರಿ 1ನೇ ಹಂತ, ಬೆಂಗಳೂರು-560050. 8. ಶ್ರೀ ಬೇ. ರಾ. ನಾಗರಾಜ್, 4-ಜಿ, 7ನೇ ಬೀದಿ, ಅಲಸೂರು, ಬೆಂಗಳೂರು-560008. 9. ಶ್ರೀ ಎ. ನರಸಿಂಹ ಮೂರ್ತಿ, ನಂ. 6, ಹೊನ್ನೂರಪ್ಪಲೇನ್, ಬೆಂಗಳೂರು-560002. 10. ಶ್ರೀ ಪಿ. ಎನ್. ಜವರಪ್ಪ ಗೌಡ, ಪತ್ರಿಕೋದ್ಯಮಿ, 'ಗುರುಕೃಪ', ವಿನೋಬ ರಸ್ತೆ, ಮಂಡ್ಯ–571401. 11. ಶ್ರೀ ಕೆ. ಟಿ. ವೀರಪ್ಪ, 'ಈಶ್ವರಿ', 182, 11ನೇ ಮೇನ್, 6ನೇ ಕ್ರಾಸ್, ಸರಸ್ವತಿಪುರ, ಮೈಸೂರು-570009. 12. ಪ್ರೊ॥ ಎಸ್. ಆರ್. ಮಳಗಿ, 10 'ಟಿ', 1ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು–560010. 13. ಶ್ರೀ ಅಂಬಳೆ ಸುಬ್ಬರಾವ್. ಪ್ರಾಂಶುಪಾಲರು, ಭಾರತೀಯ ಸಂಗೀತ ನೃತ್ಯಕಲಾ ಶಾಲಾ, ಮಡಿಕೇರಿ. 14. ಡಾ॥ ಬಿ. ಆರ್. ನಾಡಗೌಡ, ಆರೋಗ್ಯ ಕೇಂದ್ರ, ಸಿಂದಗಿ-586129, ಬಿಜಾಪುರ ಜಿಲ್ಲೆ. 15. ಶ್ರೀ ಕುಲ್ಯಾಡಿ ಮಾಧವ ಪೈ, 'ಸುಘೋಷ', ಗಾಂಧೀನಗರ ಉಪವನದ ಬಳಿ, ಮಂಗಳೂರು–575003. 16. ಪ್ರೊ॥ ವಸಂತ ಕುಷ್ಟಗಿ, ಪ್ರಾಂಶುಪಾಲರು, ಎಂ. ಎಸ್. ಐ. ಡಿಗ್ರಿ ಕಾಲೇಜು, ಗುಲಬರ್ಗ-585102. 17. ಶ್ರೀಮತಿ ಸರಸ್ವತಿ ಚಿಮ್ಮಲಗಿ, 'ತೆಂಗಾಳಿ', 3,-222, ಗಾಜಿಪುರ, ಗುಲಬರ್ಗ-585102. 18. ಕೋಬೇರ ಎ. ಸೋಮಣ್ಣ, ಪ್ಲಾಂಟರ್, 'ಅನುರಾಧಾ', ಶಾಲಾರಸ್ತೆ, ಮಡಿಕೇರಿ. 19. ಶ್ರೀ ಎಂ. ದಿವಾಕರ್ (ಅಶ್ವತ್ಥ ಪ್ರಿಂಟರ್ಸ್). 443. 1ನೇ ಮೇನ್. 44ನೇ ಕ್ರಾಸ್, 8ನೇ ಬ್ಲಾಕ್. ಜಯನಗರ. ಬೆಂಗಳೂರು-560082. 20. ಶ್ರೀ ಎಸ್. ಓ. ಪಾಟೀಲ, ಕನ್ನಡ ಅಧ್ಯಾಪಕ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಪಾವಟೆ ನಗರ, ಧಾರವಾಡ-580003. 21. ಶ್ರೀ ಎಸ್. ವೆಂಕೋಬರಾವ್, 113, ಓಂಮನೆ. 1ನೇ ಕ್ರಾಸ್ (ಅಡ್ಡರಸ್ತೆ). 4ನೇ ಮುಖ್ಯರಸ್ತೆ. ಟಾಟಾ ಸಿಲ್ಕ್ ಫಾರಂ, ಬಸವನಗುಡಿ, ಬೆಂಗಳೂರು - 560004. 22. ಪ್ರೊ॥ ಟಿ. ಡಿ. ಸುಬ್ಬಣ್ಣ, ಪ್ರಾಂಶುಪಾಲರು. ಕಲ್ಪತರು ವಿಜ್ಞಾನ ಕಾಲೇಜು, ತಿಪಟೂರು - 572202.

23. ಪ್ರೊ॥ ಅ. ರಾ. ಮಿತ್ರ, 134, ಶಂಕರ ನಿಲಯ (ಮಹಡಿ) I 'ಆರ್' ಬ್ಲಾಕ್, ರಾಜಾಜಿನಗರ, ಬೆಂಗಳೂರು - 560010. 24. ಶ್ರೀಮತಿ ಸಿ. ಎಚ್. ಭಾಗ್ಯ, 53, 4ನೇ ಮೈನ್, ಶ್ರೀರಾಮಪುರ, ಬೆಂಗಳೂರು-560021. 25. ಪ್ರೊ॥ ಕೆ. ಶಂಕರ್, ಎಲೆಕ್ಟ್ರಿಕಲ್ ಇಂಜಿನಿಯರಿಂಗ್, ಐ. ಐ. ಟಿ, ಮುಂಬೈ-400076. 26. ಪ್ರೊ॥ ಎಸ್. ಕೆ. ಲಕ್ಷ್ಮಣರಾವ್, 501, 'ಸರಸ್ವತಿ', ಗರುತ್ಮಾನ್ ಪಾರ್ಕ್, ಬೆಂಗಳೂರು-560054. 27. ಶ್ರೀಮತಿ ಇಂದಿರಾ ಸತ್ಯನಾರಾಯಣ, ವಾಣಿ ವಿಲಾಸ ಮೊಹಲ್ಲಾ, ಮೈಸೂರು,

**ಸಾಧಾರಣ ಸದಸ್ಯರು**

1. ಶ್ರೀ ಮಾವಿನಕೆರೆ ರಂಗನಾಥನ್, 11, 10ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು-560003. 2. ಡಾ॥ ಜಿ. ಎಸ್. ಮೋಹನ್, 251 (ಮಹಡಿ), ಭೈರಪ್ಪ ಬ್ಲಾಕ್, 2ನೇ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು-560028. 3. ಶ್ರೀಮತಿ ಹಿ. ವೆಂ. ಹರಿಣಿ, C/o, ವೆಂಕಟಾಚಾರ್, 1089।823।81, 3ನೇ ಕ್ರಾಸ್, ಶ್ರೀರಾಮಪುರ, ಬೆಂಗಳೂರು – 560021. 4. ಶ್ರೀಮತಿ ಲಲಿತಮ್ಮ ಡಾ॥ ಚಂದ್ರಶೇಖರ್, ಕಾರ್ತಿಕೇಯ ಪ್ರಕಾಶನ, ಹರಿಹರ–577601. 5. ಶ್ರೀ ವೈ. ಎನ್. ನಂಜುಂಡಯ್ಯ, ನಂ. 38. ಬಸಪ್ಪ ಲೇಔಟ್, ಗವೀಪುರಂ, ಬೆಂಗಳೂರು - 560019. 6. ಶ್ರೀ ಬಿ. ಎಸ್. ರಾಮಕೃಷ್ಣರಾವ್, ಸಂಸ್ಕೃತ ವಿಭಾಗ, ನ್ಯಾಷನಲ್ ಕಾಲೇಜ್, ಬಸವನಗುಡಿ, ಬೆಂಗಳೂರು-560004. 7. ಶ್ರೀಮತಿ ವಿಜಯಾ, ಇಳಾ ಪ್ರಿಂಟರ್ಸ್, 6/1, 2ನೇ ಮೈನ್, ಶ್ರೀಪುರ, ಶೇಷಾದ್ರಿಪುರ, ಬೆಂಗಳೂರು-560020. 8. ಶ್ರೀ ಎಂ. ವಾಸುದೇವರಾವ್, ಮೈರ್ಪಾಡಿ, ಕುಳಾಯಿ ಅಂಚೆ, ದ. ಕ. 574196. 9. ಶ್ರೀ ಕೆ. ವಿ. ಸುಬ್ಬರಾಯ, 296, 17ನೇ ಮೈನ್, 3ನೆಯ ಬ್ಲಾಕ್, ರಾಜಾಜಿನಗರ, ಬೆಂಗಳೂರು-560010. 10. ಶ್ರೀ ಜಿ. ಅಬ್ದುಲ್ ಬಷೀರ್, 24/3, ರಾಣೋಜಿರಾವ್ ರಸ್ತೆ, ಮುಸ್ಲಿಂ ಬ್ಲಾಕ್, ಬಸವನಗುಡಿ, ಬೆಂಗಳೂರು-560004. 11. ತ್ರಿವಿಕ್ರಮ, ವಿಜಯ ಪ್ರಕಾಶನ, ಲಕ್ಷ್ಮೀ ವೆಂಕಟೇಶ್ವರ ನಿಲಯ, 20/ಬಿ, 26 'ಎ' ಕ್ರಾಸ್, 9ನೇ ಬ್ಲಾಕ್, ಜಯನಗರ, ಬೆಂಗಳೂರು-560069. 12. ಶ್ರೀ ಪು. ಶ್ರೀನಿವಾಸ ಭಟ್ಟ, ಪಂಚವಟಿ, ಕಟೀಲು, ದ. ಕ. ಜಿಲ್ಲೆ-574148. 13. ಡಾ॥ ಎನ್. ವೆಂಕಟರೆಡ್ಡಿ, ಖಾಸಗಿ ವೈದ್ಯರು, ಸಾರಥಿ ಕ್ಲಿನಿಕ್, ಪುರಸಭೆಯ ಹಿಂಭಾಗ, ದೊಡ್ಡಬಳ್ಳಾಪುರ. 14. ಶ್ರೀ ಎನ್. ಭೈರೇಗೌಡ, ಕನ್ನಡ ಉಪನ್ಯಾಸಕ, ಎ-65 (ಮಹಡಿ), 1ನೇ ಮುಖ್ಯ ರಸ್ತೆ, ರಾಜಾಮಹಲ್ ಗುಟ್ಟಹಳ್ಳಿ, ಬೆಂಗಳೂರು-560020. 15. ಶ್ರೀ ನರಹಳ್ಳಿ ಬಾಲಸುಬ್ರಹ್ಮಣ್ಯ, 1368, 7ನೇ ಮುಖ್ಯರಸ್ತೆ. ಶ್ರೀರಾಮಪುರ. ಬೆಂಗಳೂರು-560021. 16. ಶ್ರೀಮತಿ ವಸಂತಲಕ್ಷ್ಮಿ ಕೋ. 119, ಮುಕ್ತಿಧಾಮ. ಬನಶಂಕರಿ

ಒಂದನೇ ಘಟ್ಟ, ಬೆಂಗಳೂರು-560050. 17. ಶ್ರೀ ಎನ್. ಎಸ್. ಚಂದ್ರ ಶೇಖರ್, 49, ಸೌತ್ ಕ್ರಾಸ್ ರಸ್ತೆ, ಬಸವನಗುಡಿ, ಬೆಂಗಳೂರು-560004. 18. ಕೆ. ಎಸ್. ನಾರಾಯಣಸ್ವಾಮಿ, 282, 3ನೇ ಮೈನ್, ಎನ್. ಆರ್. ಕಾಲೋನಿ, ಬೆಂಗಳೂರು-560019. 19. ಶ್ರೀ ಕೆ. ಎಂ. ಲಕ್ಷ್ಮೀನರಸಿಂಹಯ್ಯ, ವ್ಯಾಪಾರಿ, ಕ್ಯಾತಸಂದ್ರ, ತುಮಕೂರು ಜಿಲ್ಲೆ. 20. ಶ್ರೀ ಆರ್. ಶಂಕರನಾರಾಯಣ್, ನಂ. ಡಿ : 95, ಪೂರ್ವ 5ನೇ ಓಣಿ, ದೂರವಾಣಿ ನಗರ, ಬೆಂಗಳೂರು-560016. 21. ಶ್ರೀ ಕೆ. ಅಭಿಶಂಕರ್, 'ಪ್ರಶಾಂತಿ', ವೆಂಕಟಪ್ಪ ರಸ್ತೆ, ಟಾಸ್ಕರ್ ಟೌನ್, ಬೆಂಗಳೂರು–560051. 22. ಶ್ರೀ ಎಂ. ಎಲ್. ಅಚ್ಯುತರಾವ್, ನಂ. 71, ಹೊಸಮನೆ. 2ನೇ ಅಡ್ಡಬೀದಿ, ಗವೀಪುರಂ ವಿಸ್ತರಣ, ಬೆಂಗಳೂರು–560019. 23. ಶ್ರೀ ಕೆ. ಆರ್. ನರಸಿಂಹನ್, ಮುಳಬಾಗಿಲು–563131. 24. ಶ್ರೀ ಸಿ. ಆರ್. ಶ್ರೀನಿವಾಸ ಅಯ್ಯಂಗಾರ್, ಶ್ರೀ ವೀರನಾರಾಯಣ ಕೃಪ, ಚನ್ನರಾಯ ಪಟ್ಟಣ. 25. ಶ್ರೀ ಎಂ. ವಿ. ಶ್ರೀನಿವಾಸಮೂರ್ತಿ, ಸಹ ಪ್ರಾಧ್ಯಾಪಕ, ಕಲ್ಪತರು ವಿಜ್ಞಾನ ಕಾಲೇಜು, 'ಆತ್ರೇಯ', ಕೆ. ಆರ್. ಬಡಾವಣೆ, ತಿಪಟೂರು–572202. 26. ಶ್ರೀ ಮಾ. ಕೃ. ವಾಸುದೇವನ್, 48, 3ನೇ ಮುಖ್ಯರಸ್ತೆ, ಬಸಪ್ಪ ಲೇಔಟ್, ಹನುಮಂತನಗರ, ಬೆಂಗಳೂರು–560019. 27. ಡಾ॥ ಎನ್. ಶ್ರೀನಿವಾಸ ಮೂರ್ತಿ, ವೈದ್ಯರು, 106/ಬಿ, ರಾಷ್ಟ್ರೀಯ ವಿದ್ಯಾಲಯ ರಸ್ತೆ, ಬೆಂಗಳೂರು–560004. 28. ಶ್ರೀ ಎಚ್. ಎಂ. ಅಣ್ಣಪ್ಪ, ಪ್ರಾಂಶುಪಾಲರು, ಸಹಕಾರಿ ತರಬೇತಿ ಕೇಂದ್ರ, ಮಡಿಕೇರಿ. 29. ಶ್ರೀ ಸು. ವೆಂ. ಅರಗ (ಎ. ಎಸ್. ವೆಂಕಟ ರಾಮಯ್ಯ), 626, 2ನೇ ಹಂತ, ಇಂದಿರಾನಗರ, ಬೆಂಗಳೂರು–560038. 30. ಶ್ರೀ ಟಿ. ವಿಶ್ವನಾಥ ದೀಕ್ಷಿತ್, 50, ವಿವೇಕಾನಂದ ಕಾಲೋನಿ, ಹುಬ್ಬಳ್ಳಿ–580050. 31. ಶ್ರೀ ಎಸ್. ಆರ್. ಸ್ವಾಮಿ. 3, ಟ್ಯಾಗೂರ್ ಪಾರ್ಕ್, ಸುರೇಂದ್ರ ಮಂಗಳದಾಸ್ ರಸ್ತೆ, ಅಹಮದಾಬಾದ್-380015. 32. ಶ್ರೀ ಕೆ. ರಘುನಾಥ್, ಸಂಶೋಧನ ವಿದ್ಯಾರ್ಥಿ, ಕನ್ನಡ ಅಧ್ಯಯನ ವಿಭಾಗ, ಮುಂಬಯಿ ವಿಶ್ವವಿದ್ಯಾ ನಿಲಯ, ವಿದ್ಯಾನಗರಿ. ಮುಂಬೈ–400098. 33. ಶ್ರೀ ಎಸ್. ಜಿ. ವಾಸು ದೇವರಾವ್. ಪಿ/4. ಗೌರ್ನಮೆಂಟ್ ಆಫೀಸರ್ಸ್ ಫ್ಲಾಟ್ಸ್, ರೊಮೇಶ್ ಚಾನರ್ ದತ್ ರೋಡ್, ಬರೋಡ-390005. 34. ಶ್ರೀ ಬಿ. ಎನ್. ಜೋಗಿತ್ತಾಯ. (ಶ್ರೀ ರಾಮಕೃಷ್ಣ ಪವರ್ ಪ್ರೆಸ್). 22. 1ನೇ ಕ್ರಾಸ್. ಗವೀಪುರಂ ವಿಸ್ತರಣ. ಬೆಂಗಳೂರು-560019. 35. ಶ್ರೀಮತಿ ಕೆ. ವಿ. ಶಾಂತ. c/o ಎಲ್. ಗುಂಡಪ್ಪ, 254. 3ನೇ ಮೈನ್, ಗವೀಪುರ ಗುಟ್ಟಹಳ್ಳಿ. ಬೆಂಗಳೂರು-560019. 36. ಡಾ॥ ಗುಂಡೂರಾವ್, ಮಧುಗಿರಿ–572132, ತುಮಕೂರು ಜಿಲ್ಲೆ. 37. ಡಾ॥ ಶಂಕರ ಮೊಕಾಶಿ ಪುಣೇಕರ, ಇಂಗ್ಲಿಷ್ ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು–570006.

---

# ಸಹಾಯದ್ರವ್ಯ ದಾನ

**ಪ್ರೊ॥ ಟಿ. ಎಸ್. ವೆಂಕಣ್ಣಯ್ಯ ದತ್ತಿ ನಿಧಿಗೆ**

| | | ರೂ. |
|---|---|---|
| ೧ | ಶ್ರೀ ಬೆಳಗೆರೆ ಕೃಷ್ಣಶಾಸ್ತ್ರೀ | ೧೦೦೧ |
| ೨ | ಶ್ರೀ ಎಂ. ವಿ. ಸೀತಾರಾಮಯ್ಯ | ೫೦೦ |
| | ಒಟ್ಟು | ೧೫೦೧ |

**ಪ್ರೊ॥ ಟಿ. ಎಸ್. ವೆಂಕಣ್ಣಯ್ಯ ಜನ್ಮಶತಮಾನೋತ್ಸವಕ್ಕೆ**

| | | |
|---|---|---|
| ೧ | ಕರ್ನಾಟಕ ಸಾಹಿತ್ಯ ಅಕಾಡೆಮಿ | ೨೦೦೦ |
| ೨ | ಡಾ॥ ಎಸ್. ಕೆ. ಲಕ್ಷ್ಮಣರಾವ್, ಬೆಂಗಳೂರು | ೧೦೦ |
| ೩ | ಶ್ರೀಮತಿ ಕೆ. ಪದ್ಮಾವತಿ, ಬೆಂಗಳೂರು | ೨೦೦ |
| ೪ | ಪ್ರೊ॥ ಕೆ. ಶಂಕರ್, ಬೊಂಬಾಯಿ | ೩೦೦ |
| ೫ | ಇಂಟರ್ ನ್ಯಾಷನಲ್ ಇನ್‌ಸ್ಟ್ರುಮೆಂಟ್ಸ್ ಲಿ., ಬೆಂಗಳೂರು | ೧೫೧ |
| ೬ | ಶ್ರೀ ಎಚ್. ದೇವೀರಪ್ಪ, ಬೆಂಗಳೂರು | ೫೦ |
| ೭ | ಜೀವವಿಮಾ ಕನ್ನಡ ಬಳಗ, ಬೆಂಗಳೂರು | ೨೦೧ |
| ೮ | ಎಂ. ಎಸ್. ಶಂಕರಪ್ಪ, ಬೆಂಗಳೂರು | ೫೦ |
| ೯ | ಶ್ರೀಮತಿ ರಂಗಮ್ಮ, ಬೆಂಗಳೂರು | ೧೦೦ |
| ೧೦ | ಜೀವವಿಮಾ ಕನ್ನಡ ಬಳಗದ ರಾಜ್ಯೋತ್ಸವ ಆಚರಣೆ : ಅಭಿಮಾನಿಶ್ರೋತೃಗಳಿಂದ ಸಂಗ್ರಹವಾದದ್ದು | ೫೧೮ |
| ೧೧ | ಶೇಷಾದ್ರಿಪುರಂ ಸಂಜೆ ಕಾಲೇಜಿನ ಅಧ್ಯಾಪಕರು ಮತ್ತು ವಿದ್ಯಾರ್ಥಿಗಳು | ೪೧೦ |
| ೧೨ | ಶ್ರೀ ಎನ್. ಚನ್ನಬಸಪ್ಪ, ಬೆಂಗಳೂರು | ೧೦ |
| | ಒಟ್ಟು | ೪೦೯೦ |

**ಶ್ರೀ ಭವನ ನಿಧಿಗೆ** (ಮುಂದುವರಿದುದು)

| | | |
|---|---|---|
| ೧ | ಶ್ರೀ ಎನ್. ವೆಂಕಟರಮಣಯ್ಯ, ಬೆಂಗಳೂರು | ೨೫೦ |
| ೨ | ಜಯತೀರ್ಥ ರಾಜಪುರೋಹಿತ್, ರಾಯಚೂರು | ೧೦೫ |
| ೩ | ಶ್ರೀಮತಿ ಎಚ್. ಎಸ್. ಮಹಾಲಕ್ಷ್ಮಿ, ಬೆಂಗಳೂರು | ೭೫ |
| ೪ | ಶ್ರೀ ಬಿ. ಅನಂತ ಕೃಷ್ಣಶರ್ಮ, ಬೆಂಗಳೂರು | ೧೫ |
| ೫ | ಡಾ॥ ಎ. ಅಳಸಿಂಗರಯ್ಯ, ಬೆಂಗಳೂರು | ೧೦ |
| ೬ | ಶ್ರೀ ಜಿ. ರಾಮಮೂರ್ತಿ, ಬೆಂಗಳೂರು | ೧೦ |
| ೭ | ಶ್ರೀ ಎಂ. ಕೆ. ನರಸಿಂಹಮೂರ್ತಿ, ಬೆಂಗಳೂರು | ೫ |
| ೮ | ಶ್ರೀಮತಿ ವೈ. ಕೆ. ಸಂಧ್ಯಾ ಶರ್ಮ, ಬೆಂಗಳೂರು | ೫ |
| | ಒಟ್ಟು | ೩೧,೪೪೮ |

# ಗ್ರಂಥದಾನ

1) ಪ್ರೊ॥ ಎಸ್. ಕೆ. ಲಕ್ಷ್ಮಣರಾವ್ ಅವರು ಸಂಸ್ಕೃತದ ಶ್ರೀಮದ್ವಾಲ್ಮೀಕಿ ರಾಮಾಯಣ ಮತ್ತು ಇಂಗ್ಲಿಷ್‌ನ ಅದ್ವೈತ ಫಿಲಾಸಫಿ ಎಂಬ ಮೌಲಿಕ ಗ್ರಂಥಗಳನ್ನೂ,

2) ಶ್ರೀ ಜಿ, ಆರ್. ಕುಪ್ಪುಸ್ವಾಮಿ ಅವರು 'ಹಿಂದೂ ದೇಶದ ಚರಿತ್ರೆ' ಎಂಬ ಪುಸ್ತಕವನ್ನೂ,

3) ಶ್ರೀ ಕೆ. ಎಸ್. ಮಧುಸೂದನ ಅವರು ಕವನ ಭಂಡಾರಕ್ಕೆ 'ಬಸರೂರ ಕಿಚ್ಚು' ಕವನ ಸಂಕಲನದ ಎರಡು ಪ್ರತಿಗಳನ್ನೂ,

4) ಕೇಂದ್ರ ಸರ್ಕಾರದ ವಿದ್ಯಾ ಇಲಾಖೆಯವರು 'ಮೋಹಿನಿಯಾಟ್ಟಂ' ಮತ್ತು 'ಹೆಬ್ಬಾರ್' ಗ್ರಂಥಗಳ ಮೂರು ಮೂರು ಪ್ರತಿಗಳನ್ನೂ,

5) ಡಾ॥ ಎನ್. ಅನಂತರಂಗಾಚಾರ್ ಅವರು ಸುಮಾರು ೩೦೦ ಕನ್ನಡ ನುಡಿ ಸಂಚಿಕೆಗಳನ್ನೂ, ನಂಜುಂಡ ಕವಿಯ 'ಕುಮಾರರಾಮನ ಸಾಂಗತ್ಯ'ದ ಕೈಬರಹದ ಹಸ್ತಪ್ರತಿಯನ್ನೂ, ಪ್ರತಿಷ್ಠಾನದ ಗ್ರಂಥಾಲಯಕ್ಕೆ ಉದಾರವಾಗಿ ನೀಡಿದ್ದಾರೆ,

ಈ ಎಲ್ಲ ದಾನಿಗಳಿಗೂ ಪ್ರತಿಷ್ಠಾನ ಕೃತಜ್ಞವಾಗಿದೆ.

---

# ವಸ್ತು ಸಂಗ್ರಹ

**ವಿಶ್ವಕನ್ನಡ ಸಮ್ಮೇಳನ**

1981ರಲ್ಲಿ ಮಧುರೆಯಲ್ಲಿ ತಮಿಳು ವಿಶ್ವ ಸಮ್ಮೇಳನ ನಡೆಯಿತು. ಅದಕ್ಕೆ ಹಿಂದಿನ ಮುಖ್ಯ ಮಂತ್ರಿಗಳು, ಶ್ರೀ ಆರ್. ಗುಂಡೂರಾವ್ ಹೋಗಿದ್ದರು. ಕನ್ನಡ ವಿಶ್ವಸಮ್ಮೇಳನ ಒಂದನ್ನು ಯಾಕೆ ನಡಸಬಾರದು ಎಂಬ ಕಲ್ಪನೆ ಆಗ ಅವರಲ್ಲಿ ಮೂಡಿತು. ಅದನ್ನು ನಡಸುವ ನಿರ್ಧಾರವನ್ನು ಕೈಗೊಂಡು, ಅದರ ಹೊಣೆಗಾರಿಕೆಯನ್ನು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯಕ್ಕೆ ವಹಿಸಿ, ಒಬ್ಬ ಅಧಿಕ ನಿರ್ದೇಶಕರನ್ನೂ ಗೊತ್ತುಮಾಡಿದರು. ಸರ್ಕಾರಕ್ಕೆ ಇದೊಂದು ಪ್ರತಿಷ್ಠೆಯ ವಿಷಯವಾಗಿತ್ತು. ಎಲ್ಲ ವಿಚಾರದ ಬಗ್ಗೆಯೂ ಇರುವಂತೆ ಇಂಥ ಒಂದು ಸಮ್ಮೇಳನದ ಬಗ್ಗೆ ಎರಡು ಅಭಿಪ್ರಾಯಗಳು ಮೊದಲಿನಿಂದಲೂ ಇದ್ದವು. ಕನ್ನಡ ಇನ್ನೂ **'ವಿಶ್ವವ್ಯಾಪಕ'** ಆಗಿಲ್ಲ ಎನ್ನುವುದು ಸತ್ಯಸಂಗತಿ : ಅಂದೂ, ಇಂದೂ.

ಹಿಂದಿನ ಮುಖ್ಯಮಂತ್ರಿ ಶ್ರೀ ಆರ್. ಗುಂಡೂರಾವ್ ಅವರ ಕಲ್ಪನೆಯ ಕೂಸಾದ ಈ ಪ್ರಥಮ ವಿಶ್ವಕನ್ನಡ ಸಮ್ಮೇಳನವನ್ನು ನಡಸುವ ಹೊಣೆಗಾರಿಕೆ ಅದನ್ನು ವಿರೋಧಿಸಿದ್ದ ಜನತಾ ಸರ್ಕಾರದ ಪಾಲಿಗೆ ಬಂದಿತು. ಪ್ರಜಾಪ್ರಭುತ್ವ ಪದ್ಧತಿಯಲ್ಲಿ ಒಂದು ಸರ್ಕಾರ ಪ್ರಾರಂಭಗೊಳಿಸಿದ ಒಳ್ಳೆಯ ಯೋಜನೆಗಳನ್ನು ಅದರ ಸ್ಥಾನದಲ್ಲಿ ಅಸ್ತಿತ್ವಕ್ಕೆ ಬಂದ ಇನ್ನೊಂದು ಸರ್ಕಾರ ಮುಂದುವರಿಸಿ ನೆರವೇರಿಸುವುದು ಅದರ ಕ್ರಮಪ್ರಾಪ್ತವಾದ ನೈತಿಕ ಹೊಣೆಗಾರಿಕೆಯಾಗಿರುತ್ತದೆ. ನಮ್ಮ ಮಿತ್ರರೊಬ್ಬರ ಮಾತಿನಂತೆ, 'ಪರೇಚ್ಛಾ ಪ್ರಾರಬ್ಧ !' ಹಿಂದಿನ ಸರ್ಕಾರ ವಿಶ್ವ ಸಮ್ಮೇಳನದ ನಿರ್ಧಾರವನ್ನು ಕೈಗೊಂಡಾಗ ಗೋಕಾಕ್ ಚಳವಳಿಯಲ್ಲಿ ಪಾಲ್ಗೊಂಡಿದ್ದವರು ಅದನ್ನು ಪ್ರಬಲವಾಗಿ ವಿರೋಧಿಸಿದ್ದರು. ಕರ್ನಾಟಕದಲ್ಲಿ ಕನ್ನಡಕ್ಕೆ ಅಗ್ರಮಾನ್ಯ ಸ್ಥಾನಮಾನ ಇಲ್ಲದಿರುವ ಸಂದರ್ಭದಲ್ಲಿ ವಿಶ್ವಕನ್ನಡ ಸಮ್ಮೇಳನ ನಡಸುವುದು ಅರ್ಥಹೀನ ಎನ್ನುವುದು ಸಮ್ಮೇಳನವನ್ನು ವಿರೋಧಿಸಿದ್ದ ಅವರ ನಿಲುವು. ಜನತಾ ಸರ್ಕಾರ ಬಂದ ಮೇಲೆಯೂ ವಿರೋಧ ತಣ್ಣಗಾಗಿರಲಿಲ್ಲ. ಸಮ್ಮೇಳನವನ್ನು ನಡಸುವುದೇ ಬಿಡುವುದೇ ಎಂಬ ಬಗ್ಗೆ ಕನ್ನಡದ ಅಭಿಮಾನಿಗಳ ಒಟ್ಟಭಿಪ್ರಾಯವನ್ನು ಪಡೆಯುವ ಸಲುವಾಗಿ ಮುಖ್ಯಮಂತ್ರಿಗಳಾದ ಶ್ರೀ ರಾಮಕೃಷ್ಣ ಹೆಗಡೆಯವರು ಒಂದು ಪ್ರಾತಿನಿಧಿಕ ಸಭೆ ಕರೆದರು. ಆ ಸಭೆಯಲ್ಲಿಯೂ ಸಮ್ಮೇಳನವನ್ನು ವಿರೋಧಿಸುತ್ತಿದ್ದವರ ಧ್ವನಿ ಗಟ್ಟಿಯಾಗಿಯೇ ಇದ್ದಿತು. ಗೋಕಾಕ್ ವರದಿ ಜಾರಿಗೆ ಬಂದಿಲ್ಲ, ಆಡಳಿತ ಭಾಷೆ ಪೂರ್ತಿಯಾಗಿ ಎಲ್ಲ ಹಂತಗಳಲ್ಲೂ ಜಾರಿಗೆ ಬಂದಿಲ್ಲ, ಇತ್ಯಾದಿ ಕಾರಣಗಳನ್ನು ಸಮ್ಮೇಳನದ ವಿರೋಧಿಗಳು ಮುಂದೊಡ್ಡುತ್ತಿದ್ದರು. ಆದರೂ ಬಹುಮತ ಸಮ್ಮೇಳನವನ್ನು ನಡಸಬಹುದು ಎಂಬ ಕಡೆಗೇ ವಾಲಿತ್ತು.

ಸರ್ಕಾರ ಅನಿಶ್ಚಿತತೆಯ ತೂಗುಯ್ಯಾಲೆಯಲ್ಲಿ ಶೀಘ್ರನಿರ್ಧಾರವನ್ನು ಕೈಗೊಳ್ಳ ದಿದ್ದರೂ ಹಿಂದಿನ ಮುಖ್ಯಮಂತ್ರಿಗಳ ಕಾಲದಲ್ಲಿ ಸಿದ್ಧವಾಗಿದ್ದ ನೂರಾರು ಪುಸ್ತಕ ಗಳನ್ನು ಒಂದು ಸಮಾರಂಭದಲ್ಲಿ ಬಿಡುಗಡೆ ಮಾಡಿತು. ಇಷ್ಟುಮಾಡಿ ಕೈತೊಳೆದು ಕೊಂಡು ತೆಪ್ಪಗಾಯಿತೇನೋ ಎಂದು ಕೆಲವರು ಭಾವಿಸತೊಡಗಿದರು. ವಿಶ್ವಕನ್ನಡ ಸಮ್ಮೇಳನಕ್ಕೆಂದೇ ನಿರ್ಮಾಣವಾಗುತ್ತಿದ್ದ ನಾಲ್ಕು ಕೋಟಿ ರೂಪಾಯಿಗಳ ವೆಚ್ಚದ ಕಲಾಮಂದಿರ ಮತ್ತು ಅತಿಥಿ ಗೃಹಗಳ ಸಮುಚ್ಚಯ, ಇನ್ನೂ ಬಿಡುಗಡೆ ಆಗಿರದ ಸ್ಮರಣ ಸಂಪುಟ ('ಅವಲೋಕನ') ಇವೆಲ್ಲ ಸಮ್ಮೇಳನಕ್ಕಾಗಿ ಕಾಯುತ್ತಿದ್ದವು. ಇದಿಷ್ಟು, ಮೊನ್ನೆ ತಾನೆ ನಡೆದ ವಿಶ್ವಕನ್ನಡ ಮೇಳದ ಚಾರಿತ್ರಿಕ ಹಿನ್ನೆಲೆ.

ಅಖಿಲ ಕರ್ನಾಟಕ ಸಾಹಿತ್ಯ ಸಮ್ಮೇಳನ ಅಖಿಲ ಭಾರತ ಸಾಹಿತ್ಯ ಸಮ್ಮೇಳನ ಆದಂತೆ ವಿಶ್ವಸಮ್ಮೇಳನ ಏಕೆ ಆಗಬಾರದು? ತಮಿಳರೂ ತೆಲುಗರೂ ವಿಶ್ವದ ಹಲವೆಡೆ ಹೆಚ್ಚಿನ ಸಂಖ್ಯೆಯಲ್ಲಿ ನೆಲಸಿರುವಂತೆ ಕನ್ನಡಿಗರು ನೆಲಸಿರದಿದ್ದರೂ ಅವರಿರುವ ಕಡೆಗಳಲ್ಲಿ ಕನ್ನಡಿಗರೂ ಅಲ್ಪಸಂಖ್ಯೆಯಲ್ಲಿಯಾದರೂ ಇದ್ದೇ ಇದ್ದಾರೆ: ಅಮೆರಿಕ ದಲ್ಲಿಯ ಕನ್ನಡಿಗರು ಸಂಘ ಸಂಸ್ಥೆ ಸ್ಥಾಪಿಸಿಕೊಂಡು (ತ್ರಿವೇಣಿ ಕನ್ನಡ ಸಂಘ, ಕನ್ನಡ ಕೂಟ) ಕನ್ನಡ ಚಟುವಟಿಕೆ ನಡಸುತ್ತಿದ್ದಾರೆ. ಅಲ್ಲದೆ ಕನ್ನಡ ಸಾಹಿತ್ಯವನ್ನು, ಅದರ ಹೆಚ್ಚಳವನ್ನು ವಿಶ್ವಕ್ಕೆ ಮೈದೋರುವ (expose ಮಾಡುವ) ಅಗತ್ಯ ಇದೆ, ಎನ್ನುವುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಈ ಕಾರ್ಯಕ್ಕೆ ಇರುವ ಅನೇಕ ಕಾರ್ಯವಿಧಾನಗಳಲ್ಲಿ ವಿಶ್ವಕನ್ನಡ ಸಮ್ಮೇಳನದ ವ್ಯವಸ್ಥೆಯೂ ಒಂದು. ವಾಸ್ತವ ವಾಗಿ, ಇಂಥ ಒಂದು ಸಮ್ಮೇಳನವನ್ನು ನಡಸಬೇಕೆಂದು ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರಾಗಿದ್ದ ಶ್ರೀ ಜಿ. ನಾರಾಯಣ ಅವರೇ ಆಲೋಚನೆ ಮಾಡಿ. ಅದನ್ನು ಕೈಬಿಟ್ಟಿದ್ದರು. ಪರಿಷತ್ತಿಗೆ ವಿಶ್ವ ಸಮ್ಮೇಳನದ ಹೊರೆ ಹೊರುವಷ್ಟು ಆರ್ಥಿಕ ಸಹಾಯವನ್ನು ಸರ್ಕಾರದಿಂದ ಪಡೆಯುವುದು ಕಷ್ಟ ಎಂದು ಅವರು ಭಾವಿಸಿದರು. ಸರ್ಕಾರವೇ ಇದನ್ನು ಕೈಗೆತ್ತಿಕೊಂಡು ನಡಸಿದರೆ ನಡಸಬಹುದು ಎಂದೂ ಹೇಳಿದ್ದರು. ಈ ಜಾಡು ಹಿಡಿದು ಶ್ರೀ ಗುಂಡೂರಾಯರು ವಿಶ್ವಕನ್ನಡ ಸಮ್ಮೇಳನದ ಆಲೋಚನೆ ಯನ್ನು ಕಾರ್ಯಗತ ಮಾಡಬೇಕೆಂದು ಹೊರಟದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ಶ್ರೀ ಗುಂಡೂರಾಯರ ನೇತೃತ್ವದಲ್ಲಿಯೇ ಈ ಸಮ್ಮೇಳನ ನಡೆದಿದ್ದರೆ. ಭಾರತದ ಹೊರಗಿರುವ ಅನೇಕ ಕನ್ನಡಿಗರಿಗೆ ಆಹ್ವಾನ ಹೋಗಿರುತ್ತಿತ್ತು. ಆಗ ನಾವು ಬಲ್ಲಂತೆ, ಡಾ॥ ಬಿ. ಸಿ. ರಾಮಚಂದ್ರಶರ್ಮ, ಡಾ॥ ಎ. ಕೆ. ರಾಮಾನುಜನ್, ಮುಂತಾದವರಿಗೆ ಆಹ್ವಾನ ಹೋಗಿತ್ತು. ಹೆಚ್ಚಿನ ಸಂಖ್ಯೆಯಲ್ಲಿ ಅಲ್ಲದಿದ್ದರೂ ಈ ಸಲ ಅಂತಾರಾಷ್ಟ್ರೀಯ ಖ್ಯಾತಿಯ ಆಂಗ್ಲ ಕಾದಂಬರಿಕಾರ ಹಾಸನದ ರಾಜಾರಾಯರು (ಇವರು ದಿವಂಗತ ಅ. ನ. ಕೃ. ಅವರ ಸಮೀಪ ಬಂಧುಗಳು). ಲಂಡನ್ನಿನಲ್ಲಿರುವ ಭಾರತೀಯ ವಿದ್ಯಾಭವನದ ರಿಜಿಸ್ಟ್ರಾರ್ ಅವರಾದ ಶ್ರೀ ಮತ್ತೂರು ಕೃಷ್ಣಮೂರ್ತಿ. ಸಂಗೀತಜ್ಞ ಶ್ರೀ ಪೇಮು ಮುಕುಂದ. ಡಾ॥ ಎಚ್. ಕೆ. ಚಂದ್ರಶೇಖರ್ ಮುಂತಾದ

ಹಲವರು ಸಮ್ಮೇಳನದಲ್ಲಿ ಉಪಸ್ಥಿತರಾಗಿ ಭಾಗವಹಿಸಿದ್ದರು. ಮೈಸೂರಿನಲ್ಲೇ ನೆಲಸಿರುವ ನಮ್ಮ ಡಾ॥ ಆರ್. ಕೆ. ನಾರಾಯಣ್ ಅವರು ಪ್ರಶಸ್ತಿ ಪ್ರದಾನದ ದಿನ ವೇದಿಕೆಯ ಮೇಲೆ ಉಪಸ್ಥಿತರಿದ್ದರು.

ಸಮ್ಮೇಳನದ ಅಂಗವಾಗಿ ಸುಮಾರು 20 ಗೋಷ್ಠಿಗಳು ನಡೆದವು ಎಂದು ತಿಳಿದು ಬಂದಿದೆ. ಇವನ್ನು ವ್ಯವಸ್ಥೆ ಮಾಡುವ ಜವಾಬ್ದಾರಿಯನ್ನು ಆಯಾ ವಿಷಯಕ್ಕೆ ಸಂಬಂಧಪಟ್ಟ ಅಕಾಡೆಮಿಗಳಿಗೆ, ಸಂಘ ಸಂಸ್ಥೆಗಳಿಗೆ, ಸರ್ಕಾರ ವಹಿಸಿ ಕೊಟ್ಟು, ಉದ್ಘಾಟನೆ ಸಮಾರೋಪ ಪ್ರಶಸ್ತಿ ಪ್ರದಾನ ಮುಂತಾದ ಕೆಲವನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ನೀಡಿತು. 'ಕನ್ನಡ ಸಮ್ಮೇಳನ' ಎಂದರೆ ಕನ್ನಡ ಭಾಷೆ ಸಾಹಿತ್ಯಗಳಿಗೆ ಮಾತ್ರ ಮೀಸಲಾಗಿರಬೇಕಾಗಿತ್ತು ಎಂದು ಭಾಷಾ ಸಾಹಿತ್ಯಾಭಿಮಾನಿಗಳು ಬಯಸುವುದು ಸಹಜ. ಆದರೆ, 'ಕನ್ನಡ', 'ಕರ್ಣಾಟ', 'ಕರ್ನಾಟಕ', ಶಬ್ದಗಳನ್ನು ಭಾಷಾವಾಚಕವಾಗಿ ಮಾತ್ರವಲ್ಲದೆ ದೇಶವಾಚಕ ವಾಗಿಯೂ ಕವಿರಾಜಮಾರ್ಗಕಾರ, ಆಂಡಯ್ಯ, ಮುಂತಾದ ಕವಿಗಳು ಬಳಸಿದ್ದಾರೆ. ಹೀಗಿರುತ್ತ, ಈ 'ವಿಶ್ವಕನ್ನಡ ಸಮ್ಮೇಳನ' ಎನ್ನುವುದನ್ನು 'ಜಾಗತಿಕ' ಎಂಬ ಅರ್ಥದಲ್ಲಿ ಮಾತ್ರ ಏಕೆ ಸ್ವೀಕರಿಸಬೇಕು? "ಸಮಸ್ತ ಕನ್ನಡ", "ಕನ್ನಡ ನಾಡು-ನುಡಿಗಳಿಗೆ ಸಂಬಂಧಪಟ್ಟ ಎಲ್ಲ ವಿಚಾರಗಳು" ಎಂದೂ ಏಕೆ ಪರಿಗಣಿಸಬಾರದು? ಈ ಎರಡೂ ಅರ್ಥಗಳಲ್ಲಿ ವಿಚಾರ ಮಾಡಿದಾಗ ಮೊದಲ, ಎಂದರೆ ಜಾಗತಿಕ ಎಂಬ ಅರ್ಥದಲ್ಲಿ ಈ ಸಮ್ಮೇಳನ ಅರ್ಥಹೀನ, ಅಯಶಸ್ವಿ; ಎರಡನೆಯ ಅರ್ಥದಲ್ಲಿ ಬಲುಮಟ್ಟಿಗೆ ಯಶಸ್ವಿ. ಈ ಎರಡೂ ದೃಷ್ಟಿಗಳಿಂದ ಪ್ರಮುಖ ಇಂಗ್ಲಿಷ್ ಮತ್ತು ಕನ್ನಡ ಪತ್ರಿಕೆಗಳೂ ಗಣ್ಯಮಹನೀಯರೂ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ, ಎರಡು ಬಾರಿ ಸಮ್ಮೇಳನವನ್ನು ಮುಂದಕ್ಕೆ ಹಾಕಿ ಕಡೆಗೊಮ್ಮೆ ಸಮ್ಮೇಳನ ನಡಸುವ ನಿರ್ಧಾರವನ್ನು ಕೈಗೊಂಡು ನಡಸಿದ್ದನ್ನು ಮುಖ್ಯಮಂತ್ರಿಗಳು ಸಮರ್ಥಿಸಿಕೊಂಡೂ ಇದ್ದಾರೆ. ಉದ್ಘಾಟನೆಯ ದಿನ ಡಾ॥ ಶಿವರಾಮ ಕಾರಂತರೂ ಸಮರ್ಥಿಸಿದ್ದಾರೆ.

ಕನ್ನಡ ಭಾಷೆ, ಸಾಹಿತ್ಯ, ಕಾವ್ಯ, ಸಂಗೀತ, ಚಿತ್ರಕಲೆ, ನಾಟಕ, ಜಾನಪದ, ಯಕ್ಷಗಾನ, ಇತಿಹಾಸ-ರಾಜಕೀಯ, ವಿಜ್ಞಾನ, ಇತ್ಯಾದಿ ವಿಷಯಕ ಗೋಷ್ಠಿಗಳ ಜೊತೆಗೆ ಸಾಂಸ್ಕೃತಿಕ ವಸ್ತುಪ್ರದರ್ಶನ, ಸಮಗ್ರ ಗ್ರಂಥ ಪ್ರದರ್ಶನಗಳೂ ವ್ಯವಸ್ಥೆ ಗೊಂಡಿದ್ದವು. ಉದ್ಘಾಟನಾ ಸಮಾರಂಭ ಅರಮನೆಯ ಮುಂದೆ ವೈಭವೋಪೇತವಾಗಿ ನಡೆದದ್ದು, ಎರಡನೆಯ ದಿನವೂ ಅರಮನೆಯ ಮುಂದೆ ಮೈಸೂರು ಪೇಟ ಧರಿಸಿ ಜಯಚಾಮರಾಜ ಒಡೆಯರಂತೆಯೇ ಕಾಣುತ್ತ 'ಕನ್ನಡ ತಾಯಿಗೆ ನಮಸ್ಕಾರ' ಎಂದು ಕನ್ನಡದಲ್ಲಿ ಹೇಳಿ ಭಾರತದ ಪ್ರಧಾನಿ ಶ್ರೀ ರಾಜೀವ ಗಾಂಧಿಯವರು ತಮ್ಮ ಕರ್ನಾಟಕ ಪ್ರೇಮವನ್ನು ವ್ಯಕ್ತಪಡಿಸಿದ್ದು, ಈಚಿನ ದಿನಗಳ ದಸರಾ ಮೆರವಣಿಗೆ ಯಂತೆಯೇ ಕಾಣುತ್ತಿದ್ದ ಸಾಂಸ್ಕೃತಿಕ ಮೆರವಣಿಗೆ-ಇವೆಲ್ಲ 'ನೋಟಪ್ರೇಮಿ'ಗಳಾದ ಮೈಸೂರು ಜನಸ್ತೋಮದ ಮೆಚ್ಚುಗೆಯನ್ನು ನಿರ್ವಿವಾದವಾಗಿ ಪಡೆದವು. ಗೋಷ್ಠಿ

ಗಳ ಗುಣಮಟ್ಟದ ಬಗ್ಗೆ ಬರೆಯಲು ವಿಶೇಷವಾಗಿ ಏನೂ ಇಲ್ಲ. ನಮಗೆ ಪರಿಚಿತವಾಗಿರುವ ಸಾಹಿತ್ಯ ಸಮ್ಮೇಳನಗಳ ಗೋಷ್ಠಿಗಳಂತೆ, ಈಚಿನ ದಿನಗಳ "ವಿಚಾರ ಸಂಕಿರಣ"ಗಳಂತೆ, ಚಿಟಿಕೆಯಲ್ಲಿ ಚಪ್ಪರ ಹಾಕುವ ರೀತಿಯಲ್ಲಿ, ಅಂಗೈಯಲ್ಲಿ ಕೈಲಾಸ ತೋರುವಂತೆ, ಸಂಧಿಯಲ್ಲಿ ಸಮಾರಾಧನೆಯಂತೆ, ವಯಸ್ಕವರನಿಗೆ ವಿವಾಹಪೂರ್ವದಲ್ಲಿ ಉಪನಯನಮಾಡುವಂತೆ-ಅವಸರವಸರವಾಗಿ ನಡೆದುಹೋದವು. ಎಲ್ಲ ಗೋಷ್ಠಿಗಳಲ್ಲಿಯೂ, ಆಹೂತರ ಮಾತು ಹಾಗಿರಲಿ, ಪತ್ರಿಕೆಗಳ ವರದಿಗಾರರಿಗೆ ಕೂಡ ಏಕಕಾಲದಲ್ಲಿ ಹಾಜರಾಗಿರಲು ಸಾಧ್ಯವಾಗುವಂತಿರಲಿಲ್ಲ. ಕಾರಣ, ಬೇರೆ ಬೇರೆ ಸ್ಥಳಗಳಲ್ಲಿ ಬೇರೆ ಬೇರೆ ಗೋಷ್ಠಿಗಳು ಏಕಕಾಲದಲ್ಲಿ ನಡೆದವು. ಸಮ್ಮೇಳನಕ್ಕೆಂದೇ ನಿರ್ಮಿತವಾಗಿರುವ ಭವ್ಯ ಕಲಾಮಂದಿರದಲ್ಲಿ ನಡೆದ ಉದ್ಘಾಟನಾ ಸಮಾರಂಭ, ಕವಿಗೋಷ್ಠಿ, ರಾಜ್ಯಪ್ರಶಸ್ತಿ ಪ್ರದಾನ ಸಮಾರಂಭ, ಕರ್ಣಾಟಕ ವೈಜಯಂತ ಸಾಂಸ್ಕೃತಿಕ ಕಾರ್ಯಕ್ರಮ-ಇವು ಕಿಕ್ಕಿರಿದ ಜನಸ್ತೋಮಕ್ಕೆ ವಿಶೇಷ ಆಕರ್ಷಣೆಗಳಾಗಿದ್ದವು.

ಡಾ॥ ಜೀವರಾಜ ಆಳ್ವ ಅವರೇನೋ ಇದೇ ಮೊದಲನೆಯ ಹಾಗೂ ಕೊನೆಯ ಸಮ್ಮೇಳನ ಎಂದು ಸಾರಿದ್ದಾರೆ. ಹಾಗೇನೂ ಆಗಬೇಕಾಗಿಲ್ಲ. ವಿಶ್ವಸಮ್ಮೇಳನ ಆಗಬೇಕಾದರೆ ಕನ್ನಡಿಗರು ಭಾರಿ ಸಂಖ್ಯಾ ಪ್ರಮಾಣದಲ್ಲಿ ಜಗತ್ತಿನಾದ್ಯಂತ ನೆಲಸಿರಬೇಕಾದ ಅಗತ್ಯವೇನೂ ಇಲ್ಲ. ಕನ್ನಡ ಅಧ್ಯಯನಕ್ಕೆ ಹೊರದೇಶಗಳ ವಿಶ್ವವಿದ್ಯಾನಿಲಯಗಳಲ್ಲಿ ಅವಕಾಶ ಕಲ್ಪಿಸುವ ಕಡೆ; ಅನೇಕರ ಅಭಿಪ್ರಾಯದಂತೆ ಭಾರತದ ಎಲ್ಲ ಭಾಷಾ ಸಾಹಿತ್ಯಗಳ ಸಾಧನೆಯನ್ನು ಮೀರಿಸಿರುವ ಗುಣಮಟ್ಟವನ್ನು, ಪ್ರಗತಿಯನ್ನು, ಸಾಧಿಸಿರುವ ಕನ್ನಡ ಸಾಹಿತ್ಯವನ್ನು ವಿಶ್ವಕ್ಕೆ ಪರಿಣಾಮಕಾರಿಯಾಗಿ ಪರಿಚಯ ಮಾಡಿಕೊಡುವ ಕಡೆ: ಆದೇಶಗಳ ಮೂಲಕ ಕನ್ನಡಕ್ಕೆ ಅಗ್ರಸ್ಥಾನ ದೊರಕಿಸುವ ತನ್ನ ಸದಾಶಯಗಳನ್ನು (ಎಲ್ಲ ಹಂತಗಳಲ್ಲಿ ಕನ್ನಡವನ್ನು ಆಡಳಿತ ಭಾಷೆಯಾಗಿ ಮಾಡುವುದು, ಕನ್ನಡ ಮಾಧ್ಯಮದ ಶಾಲೆಗಳಿಗೆ ಅಗತ್ಯ ಉತ್ತೇಜನ, ಕನ್ನಡ ಪುಸ್ತಕಗಳನ್ನು ಒಟ್ಟಿಗೆ ಕೊಂಡು ಗ್ರಂಥಾಲಯಗಳಿಗೆ ವಿತರಣೆ ಮಾಡುವುದು, ಇತ್ಯಾದಿ) ಶೀಘ್ರವಾಗಿ ಕಾರ್ಯಗತ ಮಾಡುವ ಕಡೆ: ಶ್ರೇಷ್ಠ ವಿಶ್ವಸಾಹಿತ್ಯವನ್ನು ಕನ್ನಡಕ್ಕೆ ತರುವ ಕಡೆ-ಸರ್ಕಾರ ಇನ್ನು ಐದು ವರ್ಷಗಳಲ್ಲಿ ಲಕ್ಷ್ಯಹರಿಸಿ ತಕ್ಕಮಟ್ಟಿನ ಸಿದ್ಧಿ ಪಡೆದಾಗ, ಎರಡನೆಯ ವಿಶ್ವಕನ್ನಡ ಸಮ್ಮೇಳನವನ್ನೂ ಅಗತ್ಯವಾಗಿ ವ್ಯವಸ್ಥೆ ಮಾಡಬಹುದು.

ವಿಶ್ವಕನ್ನಡ ಸಮ್ಮೇಳನದ ಬಗೆಗೆ ಪತ್ರಿಕಾಭಿಪ್ರಾಯಭೇದಗಳು ಇದ್ದುವೆಂದು ಮೇಲೆ ಪ್ರಸ್ತಾಪಿಸಿದೆಯಷ್ಟೆ. ಈ ಸಂಬಂಧದಲ್ಲಿ, ಸಾಮಾನ್ಯವಾಗಿ ಸಮತೂಕದ ಅಗ್ರಲೇಖನಗಳನ್ನು ಬರೆಯುವ 'ಹಿಂದೂ' ಪತ್ರಿಕೆಯ ಅಗ್ರಲೇಖನವನ್ನು ಗುಣೈಕ ಪಕ್ಷಪಾತ ದೃಷ್ಟಿಗೆ ಉದಾಹರಣೆಯಾಗಿ ಕೊಡಬಹುದು. ಅದನ್ನು ಈ ಮುಂದೆ ಎತ್ತಿಕೊಡಲು ಬಯಸುತ್ತೇವೆ. (ಲೇಖನವಿಸ್ತಾರ ಭಯದಿಂದ ಅದರ ಕನ್ನಡ ಅನುವಾದವನ್ನು ಕೊಡುವ ಗೋಜಿಗೆ ಹೋಗಿಲ್ಲ):

## A purposeful Conference

IT WAS A great day for the 40 million people of Karnataka which hosted the first World Kannada conference when eminent scholars and publicists met in Mysore to exchange ideas and to adopt measures to enrich the language and the culture. That a sizable number of delegates from abroad had attended the meet would reveal the oneness of the people speaking Kannada wherever they lived and whatever activity they pursued. Like Tamil and Telugu, (world conferences in these two linguistic areas have already been held) Kannada has a hoary past and a visit to the former princely State of Mysore and the other towns in the State clearly reveals the achievements in the spheres of art, literature and the professions. But the most enduring factor which binds them together is the language which precisely is the genesis for Karnataka that came into being following the linguistic reorganisation of States. Although there has been a considerable revival of interest in Kannada, especially after Independence, as had been the case with most other Indian languages, it has been going through a process of evolution in well marked stages. Kannada literature had its revolutionary age when efforts were made through the writings to bring about a perceptible change in the social scene by eradicating, for instance, caste and other artificial barriers. The fact that the State's Poet Laureate, Mr. K. V. Puttappa, had specially spoken at the conference of the dangers of the caste system and the need to wipe it out completely shows that social purpose endures in Kannada literature. The progressive and the modernist movements are of more recent origin and symbolise certain constructive phases in the evolution of the literature. It is a matter for gratification that scholars have not been wanting in India and abroad who have done excellent work in compiling lexicons, writing commentaries on old works and enriching the field of scholarship in Kannada in diverse ways.

What is of immediate importance is to make known the achievements of the Kannadigas in the realm of poetry, prose,

and linguistics to the wider world. Dr. Shivram Karanth struck the right note when he said that the richness of Kennada should be spread to others which is clearly a warning against insularism and excessive chauvinism. The diverse cultures that is India should flow into a common stream to promote the oneness of the nation. Kannadigas have had a long experience of interacting with other cultures and if the plea at the conference that an indepth study of this facet should be made is followed up it would help to bring about the expected synthesis much sooner. It is up to the Kannada litterateurs to ponder over the specifics in this regard by establishing a meaningful rapport with their counterparts in the other States. Already a decision has been taken to establish a Kannada university in Hampi in Bellary disrict. If a fresh impetus were also to be given to the reconstruction of historic temples and monuments—symbols of Kannada achievement, that abound in Karnataka and are in a state of neglect—the world meet with the pomp and the pageantry would have served another very worthwhile purpose.

ಇಂಥ ಒಂದು ಬೃಹತ್ ಸಮ್ಮೇಳನವನ್ನು ಬಲುಮಟ್ಟಿಗೆ ಪರಿಣಾಮಕಾರಿಯಾಗುವಂತೆ ನಡಸಿ, "ಅಕ್ಕತಂಗಿಯರೊಡನೆ ನಾವು ಸಮ ನಿಮಗೆ" ಎಂಬ ಸಂತೃಪ್ತಿಯನ್ನು ತಂದುಕೊಟ್ಟ ಕರ್ನಾಟಕ ಸರ್ಕಾರ ಅಭಿನಂದನಾರ್ಹ ಎಂದು ಹೇಳಿ, ಮೇಲಿನ ಅಭಿಪ್ರಾಯಕ್ಕೆ ನಾವೂ ದನಿಗೂಡಿಸಬಹುದಲ್ಲವೆ ?

o o o

**ಅಭಿನಂದನೆ**

ಪ್ರಸಕ್ತ ವರ್ಷದ ರಾಜ್ಯೋತ್ಸವ ಸಂದರ್ಭದಲ್ಲಿ ಸಾಹಿತ್ಯ. ಸಂಗೀತ. ನಾಟ್ಯ. ಚಿತ್ರಕಲೆ. ಯಕ್ಷಗಾನ. ಪತ್ರಿಕೋದ್ಯಮ, ವೈದ್ಯ. ಜಾನಪದ. ಶಿಲ್ಪ. ಸಮಾಜಸೇವೆ. ಇತ್ಯಾದಿಯಾಗಿ ವಿವಿಧ ಕ್ಷೇತ್ರಗಳಲ್ಲಿ ನಾಡು ನುಡಿಗಳಿಗೆ ಗಣ್ಯಸೇವೆ ಸಲ್ಲಿಸಿದ 35 ಜನಕ್ಕೆ ರಾಜ್ಯಪ್ರಶಸ್ತಿಯನ್ನು ರಾಜ್ಯಸರ್ಕಾರ ಪ್ರಕಟಿಸಿತು. ಆಯಾ ವರ್ಷದ ಪ್ರಶಸ್ತಿಗಳನ್ನು ಮುಂದಿನ ವರ್ಷದ ಒಂದು ಸಮಾರಂಭದಲ್ಲಿ ನೀಡುವ ವಾಡಿಕೆ ನಡೆದು ಬಂದಿತ್ತು. ಈ ವರ್ಷದ ಪ್ರಶಸ್ತಿಗಳನ್ನು ಕನ್ನಡ ವಿಶ್ವಸಮ್ಮೇಳನದ ಸಂದರ್ಭದಲ್ಲಿ ನೀಡುವ ನಿರ್ಧಾರವನ್ನು ಕೈಗೊಂಡಿತಲ್ಲದೆ. 5000 ರೂಪಾಯಿಗಳ ಗೌರವ ಧನದ ಬದಲಾಗಿ ಚಿನ್ನದ ಪದಕವನ್ನು ಪ್ರಶಸ್ತಿ ವಿಜೇತರಿಗೆ ಕೊಡುವ ತೀರ್ಮಾನವನ್ನೂ ಮಾಡಿತು. ಅದರಂತೆ, ವಿಶ್ವಕನ್ನಡ ಸಮ್ಮೇಳನದ ಎರಡನೆಯ ದಿನ

ಸಂಜೆ ನೂತನ ಕಲಾಮಂದಿರದಲ್ಲಿ ವಿದ್ಯಾಸಚಿವರಾದ ಸನ್ಮಾನ್ಯ ಶ್ರೀ ಜಿ. ರಾಚಯ್ಯ ನವರ ಅಧ್ಯಕ್ಷತೆಯಲ್ಲಿ ಮುಖ್ಯಮಂತ್ರಿ ಸನ್ಮಾನ್ಯ ಶ್ರೀ ರಾಮಕೃಷ್ಣ ಹೆಗಡೆಯವರು ಅತ್ಯಂತ ಆತ್ಮೀಯವಾದ ರೀತಿಯಲ್ಲಿ ಪ್ರಶಸ್ತಿ ವಿಜೇತರಿಗೆ ಶಾಲು ಹೊದಿಸಿ, ಚಿನ್ನದ ಪದಕದ ಸರವನ್ನು ಕೊರಳಿಗೆ ತೊಡಿಸಿ, ಕಂಚಿನ ನೆನಪಿನ ವಸ್ತುವನ್ನು ಕೊಟ್ಟರು. 'ಕರ್ನಾಟಕ ವೈಜಯಂತ' ಮನರಂಜನೆಯ ಕಾರ್ಯಕ್ರಮಕ್ಕಾಗಿ ಮಧ್ಯಾಹ್ನದಿಂದಲೇ ಕಿಕ್ಕಿರಿದು ನೆರೆದಿದ್ದ ಪ್ರೇಕ್ಷಕಸ್ತೋಮ ಈ ಕಾರ್ಯಕ್ರಮವನ್ನು ಗಮನಾರ್ಹವಾಗಿ ಮೆಚ್ಚಿಕೊಂಡದ್ದು ಒಂದು ವಿಶೇಷವೆಂದೇ ಹೇಳಬೇಕು.

**ಪ್ರಶಸ್ತಿ ವಿಜೇತರು : ಸಾಹಿತ್ಯಕ್ಕಾಗಿ**–ಪ್ರೊ॥ ಎಸ್. ಎಸ್. ಮಾಳವಾಡ, ಡಾ॥ ಆರ್. ಸಿ. ಹಿರೇಮಠ, ಪ್ರೊ॥ ಎಂ.ವಿ. ಸೀತಾರಾಮಯ್ಯ, ಪ್ರೊ॥ ದೇ. ಜವರೇಗೌಡ, ಪ್ರೊ॥ ತ. ಸು. ಶಾಮರಾವ್. (ಕೊನೆಯ ಮೂವರು ಪ್ರತಿಷ್ಠಾನದ ಸದಸ್ಯರು) **ಸಾಹಿತ್ಯ ಸಂಶೋಧನೆ :** ಡಾ॥ ಎಂ. ಚಿದಾನಂದ ಮೂರ್ತಿ (ಪ್ರತಿಷ್ಠಾನದ ಸದಸ್ಯರು), ಡಾ॥ ರಾ. ಸತ್ಯನಾರಾಯಣ. **ಪುರಾತತ್ತ್ವ ಶೋಧನೆ :** ಡಾ॥ ಎಸ್. ಆರ್. ರಾವ್ (ಪ್ರತಿಷ್ಠಾನದ ಸದಸ್ಯರು). **ಧರ್ಮ :** ಧರ್ಮಸ್ಥಳದ ಧರ್ಮಾಧಿಕಾರಿ ಶ್ರೀ ವೀರೇಂದ್ರ ಹೆಗ್ಗಡೆ ಮತ್ತು ಶ್ರೀ ಶಿವಮೊಗ್ಗ ಸುಬ್ಬಣ್ಣ (ಸುಗಮ ಸಂಗೀತ) : ಈ ಇಬ್ಬರೂ ಪ್ರತಿಷ್ಠಾನದ ಅಭಿಮಾನಿಗಳು.

ಈ ಎಲ್ಲ ಮಹನೀಯರಿಗೂ, ಇನ್ನುಳಿದ ಪ್ರಶಸ್ತಿ ವಿಜೇತರಿಗೂ, ಪ್ರತಿಷ್ಠಾನದ ಪರವಾಗಿ 'ಲೋಚನ'ದ ಅಭಿನಂದನೆಗಳು.

**ಡಾ॥ ಎಸ್. ಆರ್. ರಾವ್ ಅವರ ಷಷ್ಟ್ಯಬ್ದಿ ಪೂರ್ತಿ ಅಭಿನಂದನ ಸಮಾರಂಭ :** ಪ್ರಸಿದ್ಧ ಪುರಾತತ್ತ್ವ ಸಂಶೋಧಕರೂ ಪ್ರತಿಷ್ಠಾನದ ಸದಸ್ಯರೂ ಆದ ಡಾ॥ ಎಸ್. ಆರ್. ರಾವ್ ಅವರ ಷಷ್ಟ್ಯಬ್ದಿ ಪೂರ್ತಿಯ ಶುಭ ಸಂದರ್ಭದಲ್ಲಿ ಅವರನ್ನು ಗೌರವಿಸುವ ಸಲುವಾಗಿ ಸನ್ಮಾನ್ಯ ಶ್ರೀ ನಿಟ್ಟೂರು ಶ್ರೀನಿವಾಸರಾಯರ ಅಧ್ಯಕ್ಷತೆ ಯಲ್ಲಿ ನಿಯೋಜಿತವಾಗಿದ್ದ ಸನ್ಮಾನ ಸಮಿತಿ 25–10–1985 ರಂದು ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಸನ್ಮಾನ ಸಮಾರಂಭವನ್ನು ಏರ್ಪಡಿಸಿತ್ತು. ಸಿಂಡಿಕೇಟ್ ಬ್ಯಾಂಕಿನ ಮಾಜಿ ಅಧ್ಯಕ್ಷರಾದ ಶ್ರೀ ಕೆ. ಕೆ. ಪೈ ಅವರು ಸಭಾಧ್ಯಕ್ಷತೆ ವಹಿಸಿದ್ದರು. ಸಮಾಚಾರ ಮತ್ತು ಯುವಜನ ಸೇವಾಸಚಿವರಾದ ಡಾ॥ ಜೀವರಾಜ ಆಳ್ವ ಅವರು '**ಮಂಜೂಷ**' ಎಂಬ ಅಭಿನಂದನ ಗ್ರಂಥವನ್ನು ಬಿಡುಗಡೆ ಮಾಡಿದರು. ಡಾ॥ ವಿ. ಕೆ. ಆರ್. ವಿ. ರಾವ್ ಅವರೂ ಡಾ॥ ಎ. ಸುಂದರ ಅವರೂ ಶ್ರೀ ಎಸ್. ಆರ್. ರಾವ್ ಅವರ ಸಾಧನೆಗಳನ್ನೂ ಆ ಮೂಲಕ ಅವರು ಅಂತಾರಾಷ್ಟ್ರೀಯ ಖ್ಯಾತಿಯನ್ನು ಪಡೆದಿರುವುದಲ್ಲದೆ ರಾಷ್ಟ್ರಕ್ಕೆ ತಮ್ಮ ನೂತನ ಸಂಶೋಧನೆಗಳ ಮೂಲಕ (ಲೊತಾಲ್ ಪ್ರದೇಶದ ಭೂಖನನ, ಹರಪ್ಪ–ಮೊಹೆಂಜದಾರೋ ಮುದ್ರಿಕೆಗಳ ಲಿಪಿಗಳ ರಹಸ್ಯ ಭೇದನ, ಸಾಗರಾಂತರ್ಗತ ಭೂಶೋಧದ ಪರಿಣಾಮವಾಗಿ ಪುರಾತನ ದ್ವಾರಕಾನಗರದ ಅಸ್ತಿತ್ವದ ಸಮರ್ಥನೆ) ಸಲ್ಲಿಸಿರುವ ಸೇವೆಯನ್ನೂ ಕುರಿತು ಭಾಷಣ ಮಾಡಿದರು.

ಪ್ರತಿಷ್ಠಾನದ ಪರವಾಗಿ ಸಂಸ್ಥಾಪಕ ಕಾರ್ಯದರ್ಶಿ ಶ್ರೀ ಎಂ. ವಿ. ಸೀ. ಅವರು ರಾವ್ ಅವರಿಗೆ ಶುಭಸಂದೇಶ ಕಳಿಸಿದ್ದರು.

**58ನೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರು :** ಪ್ರತಿಷ್ಠಾನದ 'ದಾಸಿ' ಸದಸ್ಯರಾದ ಡಾ॥ ಸಿದ್ದಯ್ಯ ಪುರಾಣಿಕರು ಗುಲ್ಬರ್ಗದಲ್ಲಿ ನಡೆಯಲಿರುವ 58ನೆಯ ಅಖಿಲ ಭಾರತ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಯಾಗಿರುವುದು ಅತ್ಯಂತ ಸಂತೋಷದ ಸಂಗತಿ. ಸರ್ಕಾರದ ಉನ್ನತ ಹುದ್ದೆಗಳಲ್ಲಿ ಸೇವೆ ಸಲ್ಲಿಸಿದ ಶ್ರೀಯುತರು ಮುಖ್ಯವಾಗಿ ಕಾವ್ಯೋಪಾಸಕರು ; ಹಲವು ಕವನ ಸಂಕಲನಗಳು ('ಕರುಣಾಶ್ರಾವಣ', ರಾಜ್ಯಸರ್ಕಾರ ಪ್ರಶಸ್ತಿ ಪಡೆದ "ಮಾನಸ ಸರೋವರ', 'ಮೊದಲು ಮಾನವನಾಗು', ಇತ್ಯಾದಿ) ಇವರ ಕಾವ್ಯಪ್ರತಿಭೆಗೆ ಸಾಕ್ಷಿಗಳು. 'ಕಾವ್ಯಾನಂದ' ಇವರ ಅನ್ವರ್ಥಕ ಕಾವ್ಯನಾಮ. ಇವರ 'ವಚನೋದ್ಯಾನ'ಕ್ಕೆ ರಾಜ್ಯಸಾಹಿತ್ಯ ಅಕಾಡೆಮಿ ಪ್ರಶಸ್ತಿ ಹಾಗೂ ಕಲ್ಕತ್ತದ ಭಾರತೀಯ ಸಾಹಿತ್ಯ ಸಂಸ್ಥೆಯ ಪ್ರಶಸ್ತಿ, ಇವು ದೊರಕಿವೆ. 'ಶರಣಚರಿತಾಮೃತ' ಇವರ ಇನ್ನೊಂದು ಗಣ್ಯಕೃತಿ. ಇದೀಗ ಪ್ರತಿಷ್ಠಾನದ ನೆರವಿನಿಂದ 'ಮಳೆರಾಯನ ಚರಿತ್ರೆ'ಯ ಸಂಪಾದನಾ ಕಾರ್ಯವನ್ನು ನಿರ್ವಹಿಸುತ್ತಿದ್ದಾರೆ. ಇವರ ಅಧ್ಯಕ್ಷತೆಯಲ್ಲಿ ಗುಲ್ಬರ್ಗ ಸಾಹಿತ್ಯ ಸಮ್ಮೇಳನ ಅತ್ಯಂತ ಯಶಸ್ವಿಯಾಗಿ ನಡೆದು, ಉತ್ಕೃಷ್ಟ ಜೀವನ ಮೌಲ್ಯ ಕಾವ್ಯ ಮೌಲ್ಯಗಳನ್ನು ಮೈಗೂಡಿಸಿಕೊಂಡಿರುವ ಅವರಿಂದ ಕನ್ನಡ ಸಾಹಿತ್ಯ ಪರಿಷತ್ತಿಗೂ ಉತ್ತಮ ಮಾರ್ಗದರ್ಶನ ದೊರೆಯಲಿ ಎಂದು ಹಾರೈಸಬಹುದಾಗಿದೆ.

**ಶಿಕ್ಷಣ ತಜ್ಞ ಪ್ರೊ॥ ಎಂ. ಪಿ. ಎಲ್. ಶಾಸ್ತ್ರೀ ಅವರಿಗೆ ಸನ್ಮಾನ :** ಮೈಸೂರು ಎಜ್ಯುಕೇಷನ್ ಸೊಸೈಟಿಯ ಮಹಾವಿದ್ಯಾಲಯದ ಪ್ರಾಂಶುಪಾಲರಾಗಿದ್ದು ಈಗ ಅವರ ಅಧ್ಯಯನ ನಿರ್ದೇಶಕರಾಗಿ ಸಂಸ್ಥೆಯ ಅಭ್ಯುದಯ ಕಾರಣಕರ್ತರಾದ ಪ್ರೊ॥ ಎಂ. ಪಿ. ಎಲ್. ಶಾಸ್ತ್ರೀ ಅವರನ್ನು ಸನ್ಮಾನಿಸಲಾಯಿತು. ಸನ್ಮಾನ ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ರಾಜ್ಯದ ಮುಖ್ಯಮಂತ್ರಿ ಶ್ರೀ ರಾಮಕೃಷ್ಣ ಹೆಗಡೆ. ಮಾಜಿ ಮುಖ್ಯಮಂತ್ರಿಗಳಾದ ಶ್ರೀ ಎಸ್. ನಿಜಲಿಂಗಪ್ಪ. ಮೈಸೂರು ವಿಶ್ವವಿದ್ಯಾನಿಲಯದ ಮಾಜಿ ಕುಲಪತಿಗಳಾದ ಪ್ರೊ॥ ಡಿ. ಜವರೇಗೌಡ. ಬೆಂಗಳೂರು ವಿಶ್ವವಿದ್ಯಾನಿಲಯದ ಕುಲಪತಿ ಡಾ॥ ಡಿ. ಶಂಕರನಾರಾಯಣ. ಮುಂತಾದ ಭಾಷಣಕಾರರೆಲ್ಲರೂ ಶ್ರೀಯುತರು ವಿದ್ಯಾಕ್ಷೇತ್ರಕ್ಕೆ ಸಲ್ಲಿಸಿರುವ ಅನುಪಮ ಸೇವೆಯನ್ನು ಮುಕ್ತಕಂಠದಿಂದ ಕೊಂಡಾಡಿದರು. ಶಾಸ್ತ್ರಿಗಳು ಸಂಸ್ಕೃತ. ಕನ್ನಡ. ಇಂಗ್ಲಿಷ್ ಭಾಷೆಗಳಲ್ಲಿ ಉದ್ದಾಮಪಂಡಿತರಾಗಿರುವರಲ್ಲದೆ ಆ ಭಾಷೆಗಳಲ್ಲಿ ಪರಿಣಾಮಕಾರಿಯಾಗಿ ಭಾಷಣ ಮಾಡಬಲ್ಲ ಶ್ರೇಷ್ಠ ವಾಗ್ಮಿಗಳೂ ಆಗಿದ್ದಾರೆ. ಸಮಾರಂಭದಲ್ಲಿ 'ಶ್ರೀಗಂಧ' ಎಂಬ ಗೌರವ ಗ್ರಂಥವನ್ನು ಅವರಿಗೆ ಅರ್ಪಿಸಿದ್ದಲ್ಲದೆ, ಒಂದು ಲಕ್ಷ ರೂಪಾಯಿಗಳ ನಿಧಿಯನ್ನೂ ಅವರಿಗೆ ಅರ್ಪಿಸಲಾಯಿತು. ಶಾಸ್ತ್ರಿಗಳು ಆ ನಿಧಿಯನ್ನು ವಿದ್ಯಾಸಂಸ್ಥೆಗೆ

ದಾನಮಾಡಿ, ತಮ್ಮ ವಿದ್ಯಾಭಿಮಾನವನ್ನು ಮೆರೆದರು. ಬಿ.ಎಂ.ಶ್ರೀ., ಟಿ. ಎಸ್. ವೆಂಕಣ್ಣಯ್ಯ, ಎ. ಆರ್. ಕೃಷ್ಣಶಾಸ್ತ್ರೀ, ಇವರುಗಳೆಂದರೆ ಶಾಸ್ತ್ರಿಗಳಿಗೆ ಅಪಾರ ಗೌರವ. ವಿದ್ಯಾರ್ಥಿಗಳಾಗಿದ್ದಾಗ ಮಹಾರಾಜ ಕಾಲೇಜಿನ ಕರ್ಣಾಟಕ ಸಂಘದ ಕಾರ್ಯದರ್ಶಿಯಾಗಿದ್ದರು. 'ಲೋಚನ' ಪತ್ರಿಕೆಯ ಪ್ರಥಮ ಸಂಚಿಕೆಯನ್ನು ಬಿಡುಗಡೆ ಮಾಡಿ ಪತ್ರಿಕೆಗೆ ಶುಭ ಕೋರಿದ ಪ್ರೊ॥ ಎಂ. ಪಿ. ಎಲ್. ಶಾಸ್ತ್ರಿಗಳಿಗೆ ಸನ್ಮಾನ ಸಂದ ಈ ಶುಭಸಂದರ್ಭದಲ್ಲಿ ಪತ್ರಿಕೆ ಪ್ರತಿಷ್ಠಾನದ ಪರವಾಗಿ ಅಭಿನಂದನೆಗಳನ್ನು ಸಮರ್ಪಿಸುತ್ತದೆ.

**ರಾಜ್ಯ ಸಾಹಿತ್ಯ ಅಕಾಡೆಮಿಯ ವಾರ್ಷಿಕ ಪ್ರಶಸ್ತಿಗಳು :**

1985ನೆಯ ಸಾಲಿಗೆ ಈ ಮುಂದೆ ಹೆಸರಿಸಿರುವ ಐವರು ಸಾಹಿತಿಗಳಿಗೆ ರಾಜ್ಯ ಸಾಹಿತ್ಯ ಅಕಾಡೆಮಿಯ ಪುರಸ್ಕಾರ ಲಭಿಸಿದೆ : ಡಾ॥ ರಾಮಚಂದ್ರ ಶರ್ಮ (ಪ್ರತಿಷ್ಠಾನದ ಸದಸ್ಯರು), ಡಾ॥ ಎಸ್. ಎಲ್. ಭೈರಪ್ಪ, ಡಾ॥ ಹಾ.ಮಾ. ನಾಯಕ, ಡಾ॥ ಎಚ್. ತಿಪ್ಪೇರುದ್ರಸ್ವಾಮಿ, ಶ್ರೀ ಶಾಂತರಸ. ಶ್ರೀಮತಿ ಕಮಲ ಹಂಪನಾ ಅವರಿಗೆ ವಿಶೇಷ ಪುರಸ್ಕಾರವನ್ನು ಅಕಾಡೆಮಿ ನೀಡಿದೆ. ಇವರೆಲ್ಲರಿಗೆ 'ಲೋಚನ'ದ ಅಭಿನಂದನೆ. (ಪ್ರತಿವರ್ಷ ಒಬ್ಬ ಗಮಕ ವಿದ್ವಾಂಸರಿಗೆ ಪ್ರಶಸ್ತಿ ನೀಡುತ್ತಿತ್ತು. ಈ ಸಲ ಗಮಕಿಯ ಆಯ್ಕೆ ಆಗಿಲ್ಲ.)

o o o

ಖ್ಯಾತ ಕಾದಂಬರಿಕಾರ ತ.ರಾ.ಸು. ಅವರ 'ದುರ್ಗಾಸ್ತಮಾನ' ಕಾದಂಬರಿಗೆ 1985ನೆಯ ಸಾಲಿಗಾಗಿ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ದೊರಕಿದೆ.

**ಷೇಕ್ಸ್‌ಪಿಯರ್ ಮಹಾಕವಿಯ ಒಂದು ಅಪ್ರಕಟಿತ ಪದ್ಯ :** ಅಮೆರಿಕದ ವಿದ್ವಾಂಸರಾದ ಗ್ಯಾರಿ ಟೇಯ್ಲರ್ ಎಂಬವರು ಈಚೆಗೆ ಷೇಕ್ಸ್‌ಪಿಯರನದು ಎಂದು ಅವರು ಅಭಿಪ್ರಾಯಪಡುವ ಒಂದು ಪದ್ಯವನ್ನು ಪತ್ತೆಹಚ್ಚಿದ್ದಾರೆ. ಈ ವಿದ್ವಾಂಸರೂ ಸೇರಿದಂತೆ ನಾಲ್ವರು ವಿದ್ವಾಂಸ ಸಂಪಾದಕರ ತಂಡ ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದ ಮುದ್ರಣಾಲಯಕ್ಕಾಗಿ "ನೂತನ ಸಮಗ್ರ ಷೇಕ್ಸ್‌ಪಿಯರ್" ಮಹಾಸಂಪುಟ ರಚನೆ ಸಂಬಂಧದಲ್ಲಿ ಸಂಶೋಧನೆ ನಡಸುತ್ತಿದ್ದಾಗ ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದ ಬೋಡ್ಲೀಯನ್ ಗ್ರಂಥ ಭಂಡಾರದಲ್ಲಿ (Bodleian Library) ಈ ಪದ್ಯ ಅವರಿಗೆ ಆಕಸ್ಮಾತ್ ಗೋಚರವಾಯಿತು. ಬಹು ವಿಧಾನಗಳ ಪರೀಕ್ಷೆಗಳನ್ನು ನಡಸಿ ದೊರೆತ ಪದ್ಯ ಷೇಕ್ಸ್‌ಪಿಯರನದೇ ಎಂಬ ತೀರ್ಮಾನಕ್ಕೆ ಈ ಸಂಪಾದಕ ವರ್ಗ ಬಂದಿದೆ. ಷೇಕ್ಸ್‌ಪಿಯರ್ ತನ್ನ 'ಮಿಡ್ ಸಮ್ಮರ್ ನೈಟ್ಸ್ ಡ್ರೀಮ್' ಹಾಗೂ 'ರೋಮಿಯೋ-ಜೂಲಿಯೆಟ್' ನಾಟಕಗಳನ್ನು ಬರೆದ ಕಾಲಾವಧಿಯಲ್ಲಿ (1593-95) ಈ ಪದ್ಯವನ್ನು ರಚಿಸಿರಬೇಕು ಎಂದು ಸಂಪಾದಕ ಸ್ಟ್ಯಾನ್ಲಿ ವೆಲ್ಸ್ ಎಂಬವರ ಅಭಿಪ್ರಾಯ. ಈ ಶೋಧ ಇಂಗ್ಲಿಷ್ ಸಾಹಿತ್ಯ ಪ್ರಪಂಚದ ವಿದ್ವದ್ವಲಯ

ದಲ್ಲಿ ಕುತೂಹಲವನ್ನು ಉಂಟುಮಾಡಿದೆ. ಈ ಶೋಧ ಪ್ರಕಟವಾದ (ನವೆಂಬರ್ 25, 1985) ತರುಣದಲ್ಲೆ ವಿದ್ವಾಂಸರೊಬ್ಬರು ಮೇಲ್ಕಂಡ ಸಂಪಾದಕರ ತೀರ್ಮಾನವನ್ನು ಅಲ್ಲಗಳೆದೂ ಇದ್ದಾರೆ. ಅದು ಹೇಗಿದ್ದರೂ, ಮಹತ್ವದ ಶೋಧ ಎನ್ನಬಹುದಾದ ಈ ಪದ್ಯವನ್ನು, 'ಲೋಚನ'ದ ಮೂಲಕ ನಮ್ಮ ವಿದ್ವಾಂಸರ ಗಮನಕ್ಕೆ ತರಬಯಸುತ್ತೇವೆ. ಪದ್ಯದ ಪಾಠ :

Shall I die? Shall I fly/Lovers baits and deceits,/Sorrow breeding? Shall I fend? Shall I send?/Shall I shew, and not rue/My proceeding?/In all duty her beauty/Binds me her servant for ever./If the scorn, I mourn,/I retire to despair, joying never.

Yet I must vent my lust/And explain inward pain/By my love breeding./If she smiles, she exiles/All my moan, if she frown,/All my hopes deceiving/Suspicious doubt, O keep out,/For thou art my tormentor/Fly away, pack away/I will love, for hope bids me enter.

'Twere abuse to accuse/My fair love, ere I prove/Her affection/Therefore try her reply/Gives thee joy—or annoy,/Or affliction/Yet howe'er, I will bear/Her pleasure with patience, for beauty/Sure (will) not seem to blot/Her deserts, wronging him doth her duty.

In a dream it did seem—/But alas, dreams do pass/As do shadows—/I did walk, I did talk/With my love, with my dove/through fair meadows/Still we passed till at last/We sat to repose us for our pleasure/Being set, lips met/Arms twined, and did bind my heart's treasure.

Next her hair, forehead fair,/Fresh and high next doth lie,/Without wrinkle/Her fair brows under those,/Star-like eyes win love's prize/When they twinkle./In her cheeks who seeks/Shall find there displayed beauty's banner/Oh admiring desiring/Breed, as I look still upon her.

Thin lips red, fancy's fed/With all sweets when he meets/And is granted/There to trade, and is made/Happy sure, to endure/Still undaunted./Pretty chin doth swim/Of all (the world) commendations/Fairest neck, no speck/All her parts merit high admirations.

A pretty bare, past compare,/Parts those plots which besots/ Still assunder/It is meet naught but sweet/Should come near that so rare/'Tis a wonder./No mishap, no scape/Inferior to nature's perfection/No blot, no spot:/She's beauty's queen in election.

Whilst I dreamt, I, exempt/(From) all care, seems to share/ pleasures in plenty/But awake, care take—/For I find to my mind/Pleasures scanty./Therefore I will try/To compass my heart's chief contenting./to delay, some say,/In such a case causeth repenting.

---

# ಶ್ರದ್ಧಾಂಜಲಿ

20–11–85 ರಂದು ಸಂಜೆ ಬೆಂಗಳೂರಿನ ಸರ್ಪಭೂಷಣಮಠದ ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಆಕಸ್ಮಿಕವೊಂದರಲ್ಲಿ ಇಲ್ಲವಾದರೆಂಬ ದಾರುಣ ವಾರ್ತೆ ಕೇಳಿ ಬೇಸರವಾಯಿತು. ಅವರು ಆಶ್ರಯ ಕೊಟ್ಟ ಸಂಘಸಂಸ್ಥೆಗಳು, ಕಲಾವಿದರು ಸಾಹಿತಿಗಳು, ಮುಮುಕ್ಷುಗಳು, ಪ್ರವಾಸಿಗರು, ಅನಾಥರು–ಇವರಿಗೆ ಲೆಕ್ಕವಿಲ್ಲ.

ಶ್ರೀಮಠವು ಕರ್ಣಾಟಕದ ಸುಪ್ರಸಿದ್ಧ ವಾಗ್ಗೇಯಕಾರರೂ, ದಾರ್ಶನಿಕರೂ, ಶಿವಯೋಗ ಸಂಪನ್ನರೂ ಆದ ಶ್ರೀ ಸರ್ಪಭೂಷಣರು ಸಾಧನೆಗೈದ ಸ್ಥಳ, ಇದು ಜ್ಞಾನ ದಾಸೋಹದ ನೆಲೆ. ಪ್ರತಿ ಸೋಮವಾರ ಸಂಜೆ ನಡೆಯುವ ಧಾರ್ಮಿಕ ಪ್ರವಚನಗಳು, ಶ್ರಾವಣ ಮತ್ತು ಕಾರ್ತಿಕಮಾಸಗಳಲ್ಲಿ ನಿರಂತರವಾಗಿ ನಡೆಸುವ ಸಾಂಸ್ಕೃತಿಕ ಕಾರ್ಯಕ್ರಮಗಳು ನಾಡಿನ ಸಂಸ್ಕೃತಿಯನ್ನು ಜೀವಂತವಾಗಿಡಲು ಸಹಕಾರಿಯಾಗುತ್ತಿದ್ದವು.

ಸ್ವಾಮೀಜಿಯವರೇ ಸ್ವತಃ ದೊಡ್ಡ ವಿದ್ವಾಂಸರಾಗಿದ್ದರು. ಬನಾರಸ್ ವಿಶ್ವ ವಿದ್ಯಾಲಯದಲ್ಲಿ ಹಿಂದಿಯಲ್ಲಿ ಸ್ನಾತಕೋತ್ತರ ಪದವಿ ಪಡೆದಿದ್ದ ಅವರು 'ವೇದಾಂತಾ ಚಾರ್ಯ' ಪದವಿಯನ್ನು ಗಳಿಸಿದ್ದರು. ಮಹತ್ವದ ಸಂಗತಿಯೆಂದರೆ ಕ್ಲಿಷ್ಟವಾದ ಪ್ರಭುದೇವರ ವಚನಗಳನ್ನು ಹಿಂದಿಗೆ ಭಾಷಾಂತರ ಮಾಡಿದ್ದಾರೆ. ಇದಲ್ಲದೆ ಅವರು ಅನೇಕ ಧಾರ್ಮಿಕ ಕೃತಿಗಳನ್ನು ರಚಿಸಿದ್ದಾರೆ. ಶ್ರೀ ಸರ್ಪಭೂಷಣ ಗ್ರಂಥಮಾಲೆಯನ್ನು ಸ್ಥಾಪಿಸಿ ಕೈವಲ್ಯಕಲ್ಪವಲ್ಲರಿ, ಜ್ಞಾನಶತಕಗಳೂ ಸೇರಿದಂತೆ ಹತ್ತಾರು ಗ್ರಂಥ ಗಳನ್ನು ಪ್ರಕಟಿಸಿ ಕನ್ನಡ ಸಾರಸ್ವತಲೋಕಕ್ಕೆ ಮಿಗಿಲಾದ ಸೇವೆ ಸಲ್ಲಿಸಿದ್ದಾರೆ.

ಸ್ಥಿತಪ್ರಜ್ಞರಾಗಿ ನಾಡವರ ಹಿತಕ್ಕೆ ಶ್ರಮಿಸಿದ ಪುಣ್ಯಜೀವಿ ಇನ್ನು ಬರೀ ದಿವ್ಯನೆನಪು.

**ಬಾಗಲೋಡಿ ದೇವರಾಯರು :** ದೇವರಾಯರು ಸಾಹಿತ್ಯ ಪ್ರಪಂಚಕ್ಕೆ ಪರಿಚಿತರಾದದ್ದು ಅವರ ಸಣ್ಣಕತೆಗಳ ಮೂಲಕ. ಇವರನ್ನು ಕಥಾಪ್ರಪಂಚಕ್ಕೆ ಪ್ರವೇಶ ಮಾಡಿಸಿದ ಶ್ರೇಯಸ್ಸು ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರಿಗೆ ಸಲ್ಲುತ್ತದೆ. ಮದರಾಸಿನ ಕ್ರಿಶ್ಚಿಯನ್ ಕಾಲೇಜಿನಲ್ಲಿ ಒಂದು ಸಮಾರಂಭಕ್ಕೆ ಭಾಗವಹಿಸಲು ಮಾಸ್ತಿಯವರು ಅಲ್ಲಿಗೆ ಹೋಗಿದ್ದಾಗ ದೇವರಾಯರ ಪರಿಚಯವಾಯಿತು; ತಾವು ನಡಸುತ್ತಿದ್ದ ಜೀವನ ಪತ್ರಿಕೆಗೆ ಅವರಿಂದ ಲೇಖನ ಬಯಸಿದರು. ದೇವರಾಯರು 'ಶುದ್ಧ ಪಟಿಂಗ' ಎಂಬ ಕತೆ ಬರೆದು ಕಳಿಸಿದರು. ಮಾಸ್ತಿಯವರ ಮೆಚ್ಚಿಗೆ ಪಡೆದ ಆ ಕತೆ ದೇವರಾಯರು ಒಬ್ಬ ಉತ್ತಮಮಟ್ಟದ ಕತೆಗಾರರಾಗಿ ಬೆಳೆಯಲು ನಾಂದಿಯಾಯಿತು. 'ಜೀವನ'ದಲ್ಲಿ ಬೆಳಕು ಕಂಡ ದೇವರಾಯರ ಕತೆಗಳನ್ನು 'ಹುಚ್ಚ ಮುನಸೀಫ ಮತ್ತು ಇತರ ಕತೆಗಳು' ಎಂಬ ಹೆಸರಿನಿಂದ ಮಾಸ್ತಿಯವರೇ ಪ್ರಕಟಿಸಿದರು (1949). ಕೆಲವು ವರ್ಷಗಳಾದ ಮೇಲೆ ಅವರ ಇನ್ನೊಂದು ಕಥಾಸಂಕಲನ 'ಆರಾಧನಾ' ಮಂಗಳೂರಿನಿಂದ ಪ್ರಕಟವಾಯಿತು.

ಒಟ್ಟಿನಲ್ಲಿ ದೇವರಾಯರ "ಕಥೆಗಳೆಲ್ಲವೂ ದೇವರು, ಧರ್ಮ, ಮನುಷ್ಯ, ಜೀವನ ಮತ್ತು ಮರಣ ಎಂಬ ಐದು ಪರಮ ತತ್ವಗಳ ಅಸ್ತಿವಾರದ ಮೇಲೆ ನಿಂತಿರುವುವು." ತಮ್ಮ ಕತೆಗಳ ಬಗೆಗೆ ಅವರೇ ಹೇಳಿಕೊಂಡಿರುವ ಮಾತು ಇದು. ಶ್ರೀ ಬಾಗಲೋಡಿಯವರ ಕತೆಗಳು ಉತ್ತಮ ಮಟ್ಟದವು ಎನ್ನುವುದರಲ್ಲಿ ಎರಡು ಮಾತು ಇಲ್ಲ.

ಬಾಗಲೋಡಿ ದೇವರಾಯರು ಅನೇಕ ವರ್ಷಕಾಲ ಮದರಾಸಿನಲ್ಲಿ, ಮಂಗಳೂರಿನಲ್ಲಿ ಅಧ್ಯಾಪಕರಾಗಿ ಕೆಲಸ ಮಾಡಿ, ಸಮರ್ಥ ಅಧ್ಯಾಪಕರೆಂದು ಹೆಸರು ಮಾಡಿದ್ದರು. ಅನಂತರ, ದೇಶಕ್ಕೆ ಸ್ವಾತಂತ್ರ್ಯ ಬಂದ ಕಾಲದಲ್ಲಿ, ವಿದೇಶ ಸೇವೆಗೆ ಸಂಬಂಧಪಟ್ಟ ಸ್ಪರ್ಧಾತ್ಮಕ ಪರೀಕ್ಷೆಗೆ ಕುಳಿತು ತೇರ್ಗಡೆಯಾಗಿ, ವಿದೇಶ ಸೇವಾ ಉದ್ಯೋಗದಲ್ಲಿದ್ದು ನಿವೃತ್ತರಾದರು. ಈ ಕಾಲದಲ್ಲಿ ವಿಶ್ವಪರ್ಯಟನದ ಫಲವಾಗಿ ಅವರ ಜೀವನಾನುಭವ ವೈವಿಧ್ಯಪೂರ್ಣವಾಯಿತು ; ಗಾಢವಾಯಿತು. ಈ ಅನುಭವವನ್ನು ಅವರು ಕಥೆಗಳ ರೂಪದಲ್ಲಿಯೂ ಇತರ ಬಗೆಯ ಕೃತಿಗಳ ರೂಪದಲ್ಲಿಯೂ ಅಭಿವ್ಯಕ್ತಿಪಡಿಸುವರೆಂದು ಅವರನ್ನು ಬಲ್ಲವರು ನಿರೀಕ್ಷಿಸಿದ್ದರು. ಆದರೆ, ಅನಿರೀಕ್ಷಿತವಾಗಿ 58 ವರ್ಷ ತುಂಬಿದ್ದ ದೇವರಾಯರು (ಜನನ : 28-2-1927) ಜುಲೈ 24 ರಂದು ದೈವಾಧೀನರಾದರು.

**ಕನ್ನಡ ಬೆರಳಚ್ಚು ಕೀಲಿಸಮುಚ್ಚಯ (ಕೀಬೋರ್ಡ್) ನಿರ್ಮಾಪಕ ಕೆ. ಅನಂತ ಸುಬ್ಬರಾವ್** ಅವರು 29-10-1985 ರಂದು ಬೆಂಗಳೂರಿನಲ್ಲಿ ನಿಧನರಾದರು.

ಸರ್ಕಾರಿ ಮಾಧ್ಯಮಿಕ ಶಾಲೆಯ ಅಧ್ಯಾಪಕರಾಗಿದ್ದ ಅನಂತ ಸುಬ್ಬರಾವ್ ಅವರು ಹಾಸನ ಜಿಲ್ಲೆಯವರು. ಸ್ವಾತಂತ್ರ್ಯ ಹೋರಾಟ ಪ್ರಾರಂಭವಾದಾಗ ತಮ್ಮ ವೃತ್ತಿಗೆ ರಾಜಿನಾಮೆ ನೀಡಿ ಹೋರಾಟಕ್ಕೆ ದುಮುಕಿದರು. ಕೆಲವು ಕಾಲ ಆಗಿನ

ದಿನಗಳಲ್ಲಿ ರಾಷ್ಟ್ರೀಯ ಭಾವನೆಯನ್ನು ಉದ್ದೀಪನಗೊಳಿಸುತ್ತಿದ್ದ 'ವಿಶ್ವಕರ್ನಾಟಕ'ದ ಪತ್ರಿಕಾಬಳಗವನ್ನು ಸೇರಿ ಪತ್ರಿಕೋದ್ಯೋಗಿಯೂ ಆಗಿ ಸೇವೆ ಸಲ್ಲಿಸಿದರು. ತಮ್ಮದೇ ಆದ ಕನ್ನಡ ಶೀಘ್ರಲಿಪಿ ಪದ್ಧತಿಯನ್ನು ರೂಪಿಸಿದ್ದರು. ಇವರು ಬೆರಳಚ್ಚು ಕೀಬೋರ್ಡ್ ರಚಿಸಿದ್ದ ಕಾಲದಲ್ಲೇ ಇನ್ನೂ ಅನೇಕ ಕೀಬೋರ್ಡುಗಳು ರಚಿತವಾಗಿದ್ದರೂ ಸರ್ಕಾರ ಅನಂತಸುಬ್ಬರಾಯರ ಕೀಬೋರ್ಡಿಗೇ ಮನ್ನಣೆ ನೀಡಿತು. ಈಗ ಆಡಳಿತ ಭಾಷೆ ಕನ್ನಡವಾಗಿರುವ ದಿನಗಳಲ್ಲಿ ಅನಂತ ಸುಬ್ಬರಾಯರು ಸಂಶೋಧನೆ ಮಾಡಿದ ಕೀಬೋರ್ಡನ್ನು ಉಳ್ಳ ಬೆರಳಚ್ಚು ಯಂತ್ರಗಳು ಎಲ್ಲ ಕಡೆಯೂ ಬಳಕೆಯಲ್ಲಿದೆ. ಯಾವ ಬಗೆಯ ಲಿಪಿ ಸುಧಾರಣೆಯೂ ಇಲ್ಲದಿರುವುದೇ ಇವರ 'ಅನಂತ' ಕೀಬೋರ್ಡಿನ ವೈಶಿಷ್ಟ್ಯ.

**ಕಾದಂಬರಿಕಾರ ಕೃಷ್ಣಮೂರ್ತಿ ಪುರಾಣಿಕ:** ಸುವಿಖ್ಯಾತ ಕಾದಂಬರಿಕಾರ ಕೃಷ್ಣಮೂರ್ತಿ ಪುರಾಣಿಕರು 13-11-85 ರಂದು ಗೋಕಾಕದಲ್ಲಿ ತಮ್ಮ ಸ್ವಗೃಹದಲ್ಲಿ ನಿಧನರಾದರು. ತೀರಿಕೊಂಡಾಗ ಅವರಿಗೆ 75 ವರ್ಷ. ಅವರು ರಚಿಸಿದ್ದ 116 ಕೃತಿಗಳ ಪೈಕಿ 80 ಕಾದಂಬರಿಗಳಾಗಿದ್ದು, 14 ಸಣ್ಣ ಕಥೆಗಳ ಸಂಕಲನಗಳಾಗಿದ್ದವು. ಅವರ ಕಾದಂಬರಿಗಳಲ್ಲಿ ಸನಾದಿ ಅಪ್ಪಣ್ಣ, ಮುತ್ತೈದೆ, ಭಾಗೀರಥಿ, ಮಣ್ಣಿನ ಮಗಳು, ಕುಲವಧು, ಧರ್ಮದೇವತೆ, ಮಮತೆಯ ಹಾಡು, ದೇವರ ಕೂಸು, ಪಾವನ ಗಂಗ ಮತ್ತು ವಸುಂಧರ ಎಂಬಿವು ಚಲನಚಿತ್ರಗಳಾಗಿಯೂ ರೂಪುಗೊಂಡಿದ್ದವು. ಅವರ ಮೊತ್ತಮೊದಲ ಕಾದಂಬರಿ 'ರಾಮನ ಕಥೆ' 1956ರಲ್ಲಿ ಬೆಳಕು ಕಂಡಿತು. ಅವರ ಅತ್ಯಂತ ಪ್ರಸಿದ್ಧ ಕೃತಿ 'ಮುಗಿಲ ಮಲ್ಲಿಗೆ' ಎಂಬ ಕಾದಂಬರಿ. 1959ರಲ್ಲಿ ಪ್ರಕಟವಾದ ಇವರ 'ಮಣ್ಣಿನ ಮಗಳು' ಕಾದಂಬರಿಗೆ ರಾಜ್ಯಪ್ರಶಸ್ತಿ ಲಭಿಸಿತು. ರಾಜ್ಯ ಸಾಹಿತ್ಯ ಅಕಾಡೆಮಿಯ ಪುರಸ್ಕಾರವೂ ಇವರಿಗೆ ದೊರೆತಿದೆ.

ಸಣ್ಣಕತೆ, ನಾಟಕ ('ಸೈರಂಧ್ರಿ'-ಸರಳ ರಗಳೆಯ ನಾಟಕ), ಕವಿತೆ, ವಿಮರ್ಶೆಗಳನ್ನು ಪುರಾಣಿಕರು ಬರೆದಿದ್ದಾರಾದರೂ ಅವರ ಮೆಚ್ಚಿನ ಸಾಹಿತ್ಯ ಕ್ಷೇತ್ರ ಕಾದಂಬರಿ. ತಾತ ಮುತ್ತಾತಂದಿರು ಪ್ರಕಾಂಡ ಪಂಡಿತರಾದರೂ ಕೃಷ್ಣಮೂರ್ತಿ ಪುರಾಣಿಕರು ಪಾಂಡಿತ್ಯಕ್ಕೆ ಒಲಿಯದೆ ಸಾಮಾನ್ಯ ಜನಕ್ಕೂ ಅರ್ಥವಾಗುವಂತೆ ಸರಳ ಶೈಲಿಯಲ್ಲಿ ಕೃತಿರಚನೆ ಮಾಡಿ ಜನಪ್ರಿಯರಾದರು.

ವಿಜಾಪುರ ಜಿಲ್ಲೆಯ ಬೀಳಗಿಯಲ್ಲಿ ಹುಟ್ಟಿದ ಕೃಷ್ಣಮೂರ್ತಿ ಪುರಾಣಿಕರು (1911) ಬಾಗಲಕೋಟೆ ಧಾರವಾಡಗಳಲ್ಲಿ ವ್ಯಾಸಂಗ ಮಾಡಿ ಬಿ. ಎ. (ಆನರ್ಸ್), ಬಿ. ಟಿ. ಪದವಿಗಳನ್ನು ಪಡೆದು ಮೂವತ್ತೈದು ವರ್ಷಕಾಲ ಅಧ್ಯಾಪಕರಾಗಿ ಸೇವೆ ಸಲ್ಲಿಸಿ ನಿವೃತ್ತರಾದರು.

**ಚಿದಂಬರಾನಂದ:** 'ಋಗ್ವೇದ ರಹಸ್ಯ' ಮತ್ತು 'ಶಂಕರಾಚಾರ್ಯ' ಎಂಬ ಬೆಲೆಯುಳ್ಳ ಕೃತಿಗಳನ್ನು ರಚಿಸಿರುವ 'ಚಿದಂಬರ' ಕಾವ್ಯನಾಮದ ಶ್ರೀ ಚಿದಂಬರ

ಶಂಕರರಾವ್ ಕುಲಕರ್ಣಿ 4-12-1985 ಬುಧವಾರ ತಮ್ಮ 66ನೇಯ ವಯಸ್ಸಿನಲ್ಲಿ ನಿಧನರಾದದ್ದು ಸಾಹಿತ್ಯ ಪ್ರಪಂಚಕ್ಕೆ ದೊಡ್ಡ ನಷ್ಟ. ಬೆಳಗಾವಿ ಜಿಲ್ಲೆಯ ಬೈಲ ಹೊಂಗಲದಲ್ಲಿ ಹುಟ್ಟಿದ ಚಿದಂಬರಾನಂದರು ಮೇಲ್ಕಂಡ ಗ್ರಂಥಗಳಲ್ಲದೆ ಕವಿತೆ, ನಾಟಕ, ಸಣ್ಣಕತೆ, ಕಾದಂಬರಿ ಸಾಹಿತ್ಯ ಪ್ರಕಾರಗಳಲ್ಲೂ ಪಲವು ಕೃತಿಗಳನ್ನು ರಚಿಸಿದ್ದುದಲ್ಲದೆ 'ಸದ್ಬೋಧ ಚಂದ್ರಿಕೆ' ಮತ್ತು 'ಜಯಂತಿ' ಮಾಸಪತ್ರಿಕೆಗಳಿಗೂ ಸೇವೆ ಸಲ್ಲಿಸಿದ್ದರು.

**ಎನ್. ವರದರಾಜನ್** : ಶ್ರೀ ಎನ್. ವರದರಾಜನ್ ಅವರು ವೃತ್ತಿಯಲ್ಲಿ ಇಂಜಿನಿಯರ್ ಆದರೂ ಪ್ರವೃತ್ತಿಯಿಂದ ಒಬ್ಬ ಗಣ್ಯ ಸಾಹಿತ್ಯಾಭಿಮಾನಿಯಾಗಿದ್ದು, ಒಬ್ಬ ನಿಷ್ಠಾವಂತ ಕೋಶಾಧಿಕಾರಿಯಾಗಿ ಪಲವಾರು ವರ್ಷ ಕನ್ನಡ ಸಾಹಿತ್ಯ ಪರಿಷತ್ತಿಗೆ ಸೇವೆ ಸಲ್ಲಿಸಿದ್ದರು. 4-12-1985 ಬುಧವಾರ ಇವರು ನಿಧನರಾದದ್ದ ರಿಂದ ಸಾರ್ವಜನಿಕ ಸೇವಾಕ್ಷೇತ್ರ ಒಬ್ಬ ಕ್ರಿಯಾಶೀಲ ಸಾಹಿತ್ಯಾಭಿಮಾನಿಯನ್ನು ಕಳೆದುಕೊಂಡಂತಾಗಿದೆ.

**ಎಂ. ಎಲ್. ಅಚ್ಯುತರಾವ್** : ಪ್ರತಿಷ್ಠಾನದ ಸದಸ್ಯರಾದ ಶ್ರೀ ಎಂ. ಎಲ್. ಅಚ್ಯುತರಾಯರು ಬಹಳ ಚಿಕ್ಕವಯಸ್ಸಿನಲ್ಲಿಯೇ ನಿಧನರಾದುದು ದುರ್ದೈವ, ಅವರು ಇಂಗ್ಲಿಷ್ ಭಾಷೆ ಸಾಹಿತ್ಯ ಹಾಗೂ ಸಂಸ್ಕೃತ ಭಾಷೆಗಳಲ್ಲಿ ಮೈಸೂರು ವಿಶ್ವ ವಿದ್ಯಾನಿಲಯದ ಎಂ. ಎ. ಪರೀಕ್ಷೆ ಮಾಡಿ, ಒಳ್ಳೇ ಭವಿಷ್ಯವುಳ್ಳ ಪತ್ರಿಕೋದ್ಯೋಗಿ ಆಗಿದ್ದರು. ಕನ್ನಡ ಸಾಹಿತ್ಯದಲ್ಲಿ ಅಪಾರ ಅಭಿಮಾನವುಳ್ಳವರಾಗಿದ್ದು ಕನ್ನಡ ಕೃತಿ ಗಳನ್ನು ನಿಷ್ಠುರವಾಗಿ ವಿಮರ್ಶೆ ಮಾಡುತ್ತಿದ್ದರು. ಮೂರು ಭಾಷೆಗಳಲ್ಲಿಯೂ ಪಾಂಡಿತ್ಯ ಹೊಂದಿದ್ದ ಇವರ ನಿಧನದಿಂದ ಪ್ರತಿಷ್ಠಾನ ಒಬ್ಬ ಭಾವಿ ವಿಮರ್ಶಕ ವಿದ್ವಾಂಸರನ್ನು ಕಳೆದುಕೊಂಡಿದೆ. ದಿವಂಗತರು ಅವಿವಾಹಿತರು ಎನ್ನುವುದೊಂದೇ ಸಮಾಧಾನದ ಸಂಗತಿ.

---



# ಲಿಪಿ ಪ್ರಕಾಶನ

1, ಬ್ಯೂಗಲ್ ರಾಕ್ ರಸ್ತೆ, ಬಸವನಗುಡಿ, ಬೆಂಗಳೂರು-560 004

ಮಾನ್ಯರೆ,

ಕನ್ನಡದ ಪ್ರಸಿದ್ಧ ಕವಿ ಶ್ರೀ ಕೆ. ಎಸ್. ನರಸಿಂಹಸ್ವಾಮಿ ಅವರ ಈವರೆಗಿನ ಎಲ್ಲ ಕವನ ಸಂಗ್ರಹಗಳನ್ನು 1) ಮೈಸೂರು ಮಲ್ಲಿಗೆ 2) ಐರಾವತ 3) ದೀಪದಮಲ್ಲಿ 4) ಉಂಗುರ 5) ಇರುವಂತಿಗೆ 6) ಶಿಲಾಲತೆ 7) ಮನೆಯಿಂದ ಮನೆಗೆ 8) ತೆರೆದ ಬಾಗಿಲು 9) ನವಪಲ್ಲವ—ಒಂದೆಡೆ ಸೇರಿಸಿ "ಮಲ್ಲಿಗೆಯ ಮಾಲೆ" ಎಂದು ಒಂದೇ ಸಂಪುಟದಲ್ಲಿ ಪ್ರಕಟಿಸಲು ಯೋಜನೆಯನ್ನು ಮಾಡಿಕೊಂಡಿದ್ದೇವೆ. 20 ಫೆಬ್ರವರಿ 1986 ರಂದು ಅವರ ಎಪ್ಪತ್ತೆರಡನೇ ಹುಟ್ಟುಹಬ್ಬದ ಸಂದರ್ಭದಲ್ಲಿ ಈ ಕವನ ಸಂಪುಟವನ್ನು ಬಿಡುಗಡೆಮಾಡಿ, ಅವರಿಗೆ ಕರ್ನಾಟಕದ ಕಾವ್ಯಪ್ರಿಯರಿಂದ ಸನ್ಮಾನವನ್ನು ಕೈಗೊಳ್ಳಬೇಕೆಂದು ತೀರ್ಮಾನಿಸಿದ್ದೇವೆ.

ಈ ಪುಸ್ತಕವು ಸುಮಾರು 550 ಪುಟಗಳ, ಕಿರೀಟ ಅಷ್ಟದಳದ ಆಕಾರದಲ್ಲಿ ಸುಂದರವಾಗಿ ಮುದ್ರಣಗೊಂಡು ನಿಮ್ಮ ಕೈಸೇರಲಿದೆ. ಇದರ ಮುಖಬೆಲೆಯು ರೂ. 75/- ಆಗಿದ್ದು, **ಪ್ರಕಟಣಪೂರ್ವ ರಿಯಾಯಿತಿ ಬೆಲೆ ರೂ. 50/- ಆಗಿರುತ್ತದೆ.** ನೀವು ಈ ಬೃಹತ್ ಕಾರ್ಯಕ್ಕೆ ಸಹಾಯಮಾಡಲು ಮುಂಗಡವಾಗಿ ರೂ. 50/- ನೀಡಿ ಆ ರಶೀತಿಯನ್ನು ಫೆಬ್ರವರಿ 20ನೇ ದಿನಾಂಕದ ನಂತರ ಕೊಟ್ಟು ಪುಸ್ತಕವನ್ನು ಪಡೆದುಕೊಳ್ಳಬಹುದು.

ಈ ಅವಕಾಶ ಒಂದೇ ಬಾರಿಗೆ ಮಾತ್ರ, ಈ ಪುಸ್ತಕದ ಮರುಮುದ್ರಣವಿಲ್ಲ.

ಶ್ರೀ ಕೆ. ಎಸ್. ನ. ಅಭಿಮಾನಿಗಳೂ, ಕಾವ್ಯಪ್ರಿಯರೂ ಆದ ನೀವು ಈ ಕಾರ್ಯಕ್ಕೆ ಬೆಂಬಲಕೊಟ್ಟು, ಪುಸ್ತಕ ಕೊಂಡು ಸಹಕರಿಸುವಿರೆಂದು ನಂಬಿದ್ದೇವೆ.

ಇತಿ ನಿಮ್ಮ
ಬಾಲಕೃಷ್ಣ ಕಿ. ನ.
ಸಂಪಾದಕ, ಲಿಪಿ ಪ್ರಕಾಶನ

---

ವಿ. ಸೂ. : ಅಂಚೆಯಲ್ಲಿ ಪುಸ್ತಕ ಬೇಕಾದವರು ರೂ. 50 + 5 = 55/- ಕಳುಹಿಸಿ ಸಹಕರಿಸಬೇಕಾಗಿ ವಿನಂತಿ.

ಲಿಪಿ ಮುದ್ರಣ, ಬೆಂ-4

